ಸಂಪಾದಕರು ಮತ್ತು ಪ್ರಕಾಶಕರು :

**ಚುಳಕಿ ಗೋವಿಂದರಾಯರು**

ಲಲಿತ ಸಾಹಿತ್ಯ ಮಾಲೆ, ಧಾರವಾಡ

ಲಲಿತ ಸಾಹಿತ್ಯ ಮಾಲೆಯ

೬ ನೆಯ ವರುಷದ ಕೊನೆಯ ಕು[illegible]

# ಮುಳ್ಳುಬೇಲಿ

ಕಾದಂಬರಿ

ಜಾಗತಿಕ ವರ್ಣದ್ವೇಷದ ಕಥಾನಕ

ಅನುವಾದಕರು : ಚುಳಕಿ ಗೋವಿಂದರಾಯರು

ಮಾರಾಟಗಾರರು :

**ಮನೋಹರ ಗ್ರಂಥ ಭಾಂಡಾರ, ಧಾರವಾಡ**

**ಕನ್ನಡ ಪುಸ್ತಕಾಲಯ, ಬೆಳಗಾವಿ**

ಮುದ್ರಕರು :

ಎಸ್. ಎಮ್. ಕುಲಕರ್ಣಿ

ಲಲಿತ ಮುದ್ರಣಾಲಯ,

ಧಾರವಾಡ

# ಅರಿಕೆ

ಮಾಲೆಯ ೭ನೆಯ ವರುಷದಲ್ಲಿ 'ಚಿರವಿರಹಿ' ಎಂಬ ಕಾದಂಬರಿಯನ್ನು ೧೯೫೦ರ ಮೇ ತಿಂಗಳಲ್ಲಿ ಪ್ರಕಟಿಸಲಾಗಿತ್ತು. ಆ ಪುಸ್ತಕ ಸಾಕಷ್ಟು ದೊಡ್ಡದಾಗಿದ್ದುದರಿಂದ ಮುಂದಿನ ಪ್ರಕಟನೆಗೆ ಸ್ವಲ್ಪ ದೀರ್ಘಾವಕಾಶವಾಯಿತು.

ಮುಂದಿನ ಕುಡಿಯೆಂದು ಶ್ರೀ. ದತ್ತಾತ್ರೇಯ ಕುಲಕರ್ಣಿಯವರ 'ಹಂಬಲ'ವೆಂಬ ಕಾದಂಬರಿಯನ್ನು ಕೊಡುವದಾಗಿ ಪ್ರಕಟಿಸಿದ್ದೆವು. ಕಾರಣಾಂತರದಿಂದ ಅದೇ ಲೇಖಕರ 'ಹಾಸು-ಹೊಕ್ಕು' ಎಂಬ ಈ ಕಥಾಸಂಗ್ರಹವನ್ನು ಪ್ರಕಟಿಸಿದ್ದೇವೆ. ಈ ಕಥೆಗಳು ನಮ್ಮ ವಾಚಕರಿಗೆ ಮೆಚ್ಚಿಗೆಯಾಗುವವೆಂದು ಆಶಿಸಲಾಗಿದೆ. 'ಹಂಬಲ' ಕಾದಂಬರಿಯನ್ನು ಮುಂದಿನ ವರುಷದಲ್ಲಿ ಪ್ರಕಟಿಸಲಾಗುವದು.

ಮುಂದಿನ ಕುಡಿಯಾಗಿ 'ಮುಳ್ಳುಬೇಲಿ' ಎಂಬ ಒಂದು ಅನುವಾದಿತ ಕಾದಂಬರಿಯನ್ನು ಇದೇ ತಿಂಗಳಲ್ಲಿಯೇ ಪ್ರಕಟಿಸಲಾಗುವದು. ಅಲ್ಲಿಗೆ ಮಾಲೆಯ ೭ನೆಯವರುಷದ ೬೦೦ ಪುಟಗಳ ಸಾಹಿತ್ಯ ಒದಗಿಸಿದಂತಾಗುವದು.

'ಚಿರವಿರಹಿ' ಕಾದಂಬರಿಯನ್ನು ಕನ್ನಡ ವಾಚಕರು ಮೆಚ್ಚಿ ಮಾಲೆಗೆ ಚಂದಾದಾರರಾಗಲು ತಕ್ಕಷ್ಟು ಸಂಖ್ಯೆಯಲ್ಲಿ ಮುಂದೆ ಬರುತ್ತಿದ್ದಾರೆ. ಮುಂದೆಯೂ ಒಳ್ಳೆಯ ಅಚ್ಚುಕಟ್ಟಾದ ಸಾಹಿತ್ಯಕೃತಿಗಳನ್ನೇ ಪ್ರಕಟಿಸಲಾಗುವದೆಂದು ಈ ಮಹನೀಯರಿಗೆ ಸೂಚಿಸಬಯಸುತ್ತೇವೆ.

ಪ್ರತಿಕೂಲ ಕಾಲದ ಪರಿಣಾಮವಾಗಿ ಈಗ ದೊರೆಯುತ್ತಿರುವ ಪ್ರೋತ್ಸಾಹ ಮಾಲೆಗೆ ಸಾಲದು. ನಮ್ಮ ಚಂದಾದಾರರೂ, ಪ್ರಕಟನೆಗಳ ಮೆಚ್ಚಿನ ವಾಚಕರೂ ತಮ್ಮ ಸ್ನೇಹಿತ ವರ್ಗದಲ್ಲಿ ಮಾಲೆಯ ಬಗ್ಗೆ ಒಂದೆರಡು ಮಾತನ್ನು ಹೇಳಿ ಇನ್ನಷ್ಟು ಚಂದಾಸಂಪತ್ತು ಹೆಚ್ಚಿಸಲು ಸಹಾಯ ಮಾಡಬೇಕೆಂದು ಬಿನ್ನವಿಸುತ್ತೇವೆ.

ಕನ್ನಡ ರಸಿಕ ಓದುಗರಿಗೆ ಅವರು ನಮಗೆ ಕೊಡುವ ಪ್ರೋತ್ಸಾಹಕ್ಕೆ ಪ್ರತಿಯಾಗಿ ತಕ್ಕ ಸಾಹಿತ್ಯ ಪ್ರಕಟಿಸುವ ಭರವಸೆ ಕೊಡುತ್ತೇವೆ.

ಧಾರವಾಡ
೧-೧-೫೧

ಜುಳಕಿ ಗೋವಿಂದರಾಯ
ಸಂಪಾದಕ, ಲಲಿತ ಸಾಹಿತ್ಯಮಾಲೆ

# ಕನ್ನಡಕ

ಶ್ರೀ ದತ್ತಾತ್ರೇಯರು 'ಹಾಸು-ಹೊಕ್ಕಿ'ನಲ್ಲಿ ನೂಲು-ರೇಶಿಮೆ-ಜರ ಎಲ್ಲವನ್ನೂ ಬಳಸಿಕೊಂಡು ಕನ್ನಡತಾಯಿಗೆ ನಯವಾದ ಉಡುಗೊರೆಯನ್ನು ನೀಡಿದ್ದಾರೆ. ಸಾಹಿತ್ಯ ವ್ಯಾಖ್ಯಾವಳಿಯನ್ನು ಹಿಡಿದು ನೋಡುವ ತಾಂತ್ರಿಕ ಬುದ್ಧಿಗೆ ಈ ಪುಸ್ತಕವನ್ನು ಏನೆಂದು ಹೆಸರಿಟ್ಟು ವರ್ಗೀಕರಿಸುವುದು ಸಾಧ್ಯವಾಗಲಿಕ್ಕಿಲ್ಲ; ಹತ್ತೇ ಕಥನಗಳಲ್ಲಿ ಮೂರು ನಾಲ್ಕು ಜಾತಿಗಳು ಕಾಣಬಹುದು. ಆದರೆ ಪ್ರತಿಯೊಂದರಲ್ಲೂ ಕುಸುರು-ಕಲೆ, ರಸ-ಕಳೆ ಇವೆ ಎಂಬುದನ್ನು ರಸಿಕ ಹೃದಯ ಕಾಣುತ್ತದೆ. ಸರಳವಾದ ಮನವಟ್ಟುವ ಸಲಿಗೆಯ ಶೈಲಿ ಎಲ್ಲವುಗಳಲ್ಲೂ ಏಕತೆಯ ಅನುಭವ ತರುತ್ತದೆ. ಈ ಸಾಹಿತ್ಯ ವೈವಿಧ್ಯದಲ್ಲಿ ತೀರ ಭಿನ್ನವಾಗಿ ತೋರುವ ಸಾಹಿತ್ಯ ಭಂಡಾರಿಯ 'ಆತ್ಮಕಥನ' ಕೂಡ, ವಿಡಂಬನ-ಪರಿಹಾಸ್ಯಪ್ರಧಾನವಾಗಿಯೂ ಸಲಿಗೆಯ ಸ್ವಾರಸ್ಯದಿಂದ ಸಂಕಲನದಲ್ಲಿ ಹೊಂದಿಕೊಂಡಿದೆಯೆನ್ನಬಹುದು. ಹಾಗೆ ನೋಡಿದರೆ 'ಭಟ್ಟರ ಮದುವೆ,' 'ಶನಿವಾರ,' 'ಸಮಾಜಪುರುಷ,' 'ಭಜನೆಯ ಭೂತ'ಗಳ ಹೊರತುಳಿದುವು ಆತ್ಮೀಯ ಪ್ರಬಂಧವೆನಿಸಿವೆ.

ಸಾಹಿತ್ಯಶಿಲ್ಪಿಗೆ ದೊಡ್ಡದೊಂದು ವಸ್ತುವೇ ಸಿಕ್ಕಬೇಕೆಂದಿಲ್ಲ; ನಡೆದ ಒಂದು ಸಣ್ಣ ಪ್ರಸಂಗ, ಕಂಡ ಒಂದು ಚಿಕ್ಕ ನೋಟ, ಅನುಭವಿಸಿದ ಒಂದು ಸಾಮಾನ್ಯ ವಿಷಯವೂ ಸಾಕು—ಅದರೊಳಗಿನ ತಿರುಳಿನಿಂದಲೇ ಆ ಮಾತಿನ ಮೋಡಿಕಾರ ಸಾಹಿತ್ಯ ಸೃಷ್ಟಿಯನ್ನು ಸೃಷ್ಟಿಸುತ್ತಾನೆ. ಆ ತಿರುಳಿನ ಸವಿಯನ್ನು ರಸಿಕರಿಗೆ ಉಣಿಸುತ್ತಾನೆ. ನಿತ್ಯಪರಿಚಯದಿಂದ ನಮಗೆ ಸಣ್ಣದೆಂದು ಕಾಣುವುದನ್ನೇ ಎತ್ತಿಕೊಂಡು ಈ ಸಾಹಿತಿ ಜೇಡ ದತ್ತಪ್ಪ ನೇಯುತ್ತಾರೆ: ಬಟ್ಟೆ ಯಾವ ಬಗೆಯದೇ ಆದರೂ ಅದಕ್ಕೆ ತನ್ನದೇ ಆದ ಅಂದ ಚಂದ, ನಯ ನುಣುಪು ತರುತ್ತಾರೆ. ಈ ಕಲೆಯಲ್ಲಿ ಇವರ ಕೈ ಪಳಗುತ್ತಿದೆ ಎಂದು ಧಾರಾಳವಾಗಿ ಹೇಳಬಹುದು. ಏಕಾಂಕಿಕೆ-ಮೇಳಾಂಕಿಕೆಯ ಸಾಹಿತ್ಯಪ್ರದರ್ಶನದಲ್ಲಿ ಇವರ ಉಡುಗೊರೆ ನಿಜಕ್ಕೂ ತಾಳಿಕೆಯಲ್ಲಿ ಹೆಚ್ಚು ಗುಣ ಪಡೆಯುವುದೆಂಬ ಭರವಸೆಯಿದೆ.

ಇದು ಪತ್ರಾತ್ರೇಯರ ಎರಡನೆಯ ಹೊತ್ತಗೆ. ಮೊದಲನೆಯದು
'ಹಕ್ಕಿನೋಟ'-ವ್ಯಕ್ತಿಚಿತ್ರ ಅಲ್ಲಿಂದೀಚೆ ಆರುವರುಷಗಳ ಅವಧಿಯಲ್ಲಿ
ಅವರ ಶೈ-ಗುಣ ಹೆಚ್ಚಿದುದಲ್ಲದೆ, ಅವರನೋಟವೂ ಹರವಾಗಿ ಆಳವಾಗಿದೆ.
ಆಗ ವ್ಯಕ್ತಿಗಳನ್ನು ಕಂಡವರು ಈಗ ತನ್ನ ಬಾಳನ್ನು, ನಾಡ ನಡತೆಯನ್ನು,
ಸಮಾಜದ ಕಟ್ಟು ಕಟ್ಟಳೆಗಳನ್ನು ನೋಡುತ್ತಾರೆ. ಅವುಗಳಲ್ಲಿಯ ಬೇವು-
ಬೆಲ್ಲಗಳನ್ನು, ಸರಿ-ಬೆಸಗಳನ್ನು. ಒಳಿತು-ಕೆಡಕುಗಳನ್ನು ಚುಟುಕದಲ್ಲಿ ಎದೆ-
ಹಿಡಿವಂತೆ ಹೇಳುತ್ತಾರೆ ಬೇವಿಲ್ಲದ ಬರಿ ಬೆಲ್ಲದ ಬಾಳು ಯಾರಿಗಿದೆ? ಎಳ್ಳು
ಬೆಲ್ಲ ತಿನ್ನುವುದು ಸಂಕ್ರಾಂತಿ. ಬೇವುಬೆಲ್ಲ ತಿನ್ನುವುದು ಯುಗಾದಿ;-ಎರಡೂ
ದೊಡ್ಡ ಹಬ್ಬದ ದಿನಗಳೇ. 'ಹಾಸು-ಹೊಕ್ಕು' (ಇವಳು-ಇವರು). 'ಪರಿ-
ಪಾಠ,' 'ಬದಲಾವಣೆ'ಗಳಲ್ಲಿ ನವದಾಂಪತ್ಯದ ಸರಸ-ವಿರಸ, 'ಸಾಹಿತ್ಯ
ಭಂಡಾರಿ'ಯಲ್ಲಿ ಪುಸ್ತಕಪ್ರಪಂಚದ ಸುಖ-ದುಃಖ ಸೊಗಸಾಗಿಯೇ ಹರಿ
ದಿದೆ. ಪ್ರಣಯವೇ ಜೀವಾಳವಾಗಿ ಪ್ರವಹಿಸುವ ಸಲ್ಲಾಪದಲ್ಲಿ ಆಗಾಗ ತೋರಿ
ಬರುವ ಸಾಮಾಜಿಕ ವಿಷಯದ ಒಂದೆರಡೇ ಮಾತುಗಳು ಮಾರ್ಮಿಕವಾಗಿವೆ.
ಪುಸ್ತಕಪ್ರಪಂಚದ ವಿವಿಧಕ್ಷೇತ್ರಗಳಲ್ಲಿ ನಾನಾ ಜಾತಿಯ ಜನಸಂಪರ್ಕದಲ್ಲಿ
ಅನುಭವಿಸುವ ಕಟುಸತ್ಯವನ್ನು ವಿಡಂಬಿಸುವಾಗಲೂ ಸಹಾನುಭೂತಿಯಿದೆ
'ಪುಸ್ತಕ ಭಂಡಾರಿ'ಗೆ. ಈ ಸಹಾನುಭೂತಿ ವ್ಯವಹಾರ ಕೌಶಲವೇ ಅಲ್ಲ;
ಎಲ್ಲರನ್ನೂ ಅವರವರ ವಾತಾವರಣದಲ್ಲಿ ಅವರವರ ಮಟ್ಟದಲ್ಲಿ ನಿಂತು
ತನ್ನನ್ನು ನೋಡುತ್ತಾನೆ ಈತ

'ಸಮಾಜಪುರುಷ' ಒಂದು ಒಳ್ಳೆಯ ಕಥಾವಸ್ತು. ಆದರೆ ಕಥೆ
ಗೊಂದು ದೃಶ್ಯವಸ್ತುವಿರಲೇಬೇಕೆಂದು ಓದುಗರು ನಿರಾಶರಾಗಬಾರದು.
ಇಲ್ಲಿ ಕಥಾವಸ್ತು ಹಿನ್ನೆಲೆಯಾಗಿದೆ. ಆ ಹಿನ್ನೆಲೆಯ ಮೇಲೆ ಆಚಾರ್ಯರ ವ್ಯಕ್ತಿ
ಚಿತ್ರವನ್ನು ನೇತುಹಾಕಿ, ಅದರ ಮೇಲೆ ಸಮಾಜಪುರುಷನ ಸಾವಿರ ನಾಲಗೆ
ಯಿಂದ ಅವರ ಚರಿತ್ರವನ್ನು ಬರೆದಿದ್ದಾರೆ ಲೇಖಕರು. ಇದ್ದುದನ್ನಿಲ್ಲಿ
ಬಿಚ್ಚಿಟ್ಟು ತೋರುವುದಕ್ಕಿಂತ, ಓದುಗರ ವಿಚಾರವಿನ್ಯಾಸಕ್ಕೆ ತುಂಬ ಆಸ್ಪದ
ಬಿಟ್ಟಿದ್ದಾರೆ. ಗೌಪ್ಯವನ್ನು ಅಸಂದಿಗ್ಧವಾಗಿ ರೇಖಿಸುವುದೇ ಇಲ್ಲಿ ಬರೆಹಗಾರನ
ವೈಶಿಷ್ಟ್ಯ, ಜಾಣ್ಮೆ. ಈ ಅಸ್ಪಷ್ಟತೆಯೇ ಚೆಲುವಾಗಿ ಸೊಗಸಾಗಿ ನಿಂತುದನ್ನು
ರಸಿಕರು ಕಾಣಬಹುದಾಗಿದೆ. ಈ ಕಥಾಜಾತಿ ಕನ್ನಡದಲ್ಲಿ ಹೊಚ್ಚಹೊಸ

ತೆಂದು ಹೇಳಲಾಗದಿದ್ದರೂ ನನಗೆ ತಿಳಿದಮಟ್ಟಿಗೆ ಅಪರೂಪವಲ್ಲ ಎಂದಷ್ಟು ಬಲ್ಲೆ. 'ಶನಿವಾರ,' 'ಭಜನೆಯ ಭೂತ,' 'ಕಾಯಿಸ್ಟ್ರಟ್ಟ್ ಸ್ಥಳ'ಗಳ ಸಾಮಾನ್ಯವಾದ ವಸ್ತು ಅದವಾ ಪ್ರಸಂಗಗಳಲ್ಲಿ ಪಾತ್ರಗಳ ಮನೋವಿಶ್ಲೇಷಣೆ ಚೆನ್ನಾಗಿ ವಿಕಾಸಗೊಂಡಿದೆ ಈ ಪ್ರಸಂಗಗಳನ್ನು ಬಿಗ್ಗಿಸುವಲ್ಲಿ ಬಳಸಿದ ಭಿನ್ನಭಿನ್ನ ತಂತ್ರಗಳ ಔಚಿತ್ಯವೇ ಒಂದು ವಿಶೇಷವೆಂಬುದನ್ನು ಗಮನಿಸಬೇಕು.

ದತ್ತರು ಬರೆಯುತ್ತಾರೆ. ಬರೆದುದನ್ನು ಸೊಗಸಾಗಿಯೇ ಬರೆಯಬಲ್ಲರು, ಬರೆಬರೆದು ಸಿದ್ಧರಾಗಬಲ್ಲರು ಎಂಬ ಆಸೆ ನಮಗೆಲ್ಲರಿಗೆ ಈ ಎರಡೇ ಕೃತಿಗಳಿಂದ ಜನಿಸುತ್ತದೆ. ಹೊಸ ಬರೆಹಗಾರನಿಗೆ ಕೃತಿಯ ಪ್ರಕಟನೆಯೇ ಉತ್ತೇಜನಕಾರಿ ಎಂಬ ಅಡಿಕೆ ಸತ್ಯವಾಗಿದ್ದರೆ, ಪ್ರಕಟನೆಗೊಂದು ಮಾಳಿ, ಅದರ ಪ್ರಚಾರಕ್ಕೊಂದು ಭಂಡಾರ ಇದ್ದೂ ಐವತ್ತು ಪುಟಗಳ 'ಹಕ್ಕಿನೋಟ'ದ ತರುವಾಯ ಆರು ವರುಷಗಳಲ್ಲಿ ಈ ನೂರೇ ಪುಟಗಳನ್ನು ಈಯುತ್ತಿರುವುದು ಆಶ್ಚರ್ಯವೆನ್ನಬೇಕಾಗುತ್ತದೆ. ಈ ಲೇಖಕರ ಆಲಸ್ಯಕ್ಕೆ ಸಂಕೋಚವೇ ಕಾರಣವಾಗಿರಬಹುದು ಆ ಮಾನಸಿಕರೋಗಕ್ಕೆ ಎಡೆಗೊಡದೆ, ಬರೆವಣಿಗೆಗೆ ಅವಕಾಶವನ್ನು ಕಲ್ಪಿಸಿಕೊಡುವ ಪ್ರಕಟನೆಯ ಅನುಕೂಲ್ಯವನ್ನು ಉಪಯೋಗಿಸಿಕೊಳ್ಳದಿದ್ದರೆ, ರಸಿಕರಿಗೆ ಆಸೆ ತೋರಿಸಿ ನಿರಾಶೆಗೊಳಿಸಿದಂತಾದೀತೆಂದು ನನ್ನಂತೆಯೇ—ಇವೆರಡು ಹೊತ್ತಗೆಗಳನ್ನೋದಿದ ಬಹುಜನಕ್ಕೆ ಎನಿಸೀತು.

ಇಷ್ಟೇ: ಆಯ್ತು: 'ಜೇನ್‌ಹನಿ' ಹೋಮದೊಂದಿಗೆ ಆರಂಭಿಸಿದ ಮುನ್ನುಡಿ ಬರೆಹದ 'ಅ(ಮು)ಸಿ ಧಾರಾವ್ರತ'ಕ್ಕೆ ಮಂಗಳಂ. ಕೊನೆಯ ಇಪ್ಪತ್ತನೆಯ ಸಿಗಾರ್ ಸ್ವಾಹಾಕರಿಸುತ್ತೇನೆ. ನಮಸ್ತೇ.

೪-೧-೧೯೫೧ —ಮಲ್ಹಾರಿ

# ಸಂಚಕಾರ

ಬಾಳಿನಲ್ಲಿ ಅರಿವು-ಮರೆವು, ಸಂತಸ-ಸಂತಾಪ, ಸಿಟ್ಟು-ಶಾಂತಿ, ಚಿಟಿ-ಪಟಿ, ಹಿಗ್ಗು-ತಗ್ಗು, ಅನುರಾಗ-ವಿರಾಗಗಳೆಲ್ಲ ಹಾಸು-ಹೊಕ್ಕಾಗಿ ಹೆಣೆದುಕೊಂಡಿವೆ. ಆದರಿಂದ ಇನ್ನೊಂದನ್ನು ಪ್ರತ್ಯೇಕಿಸುವದು ಬಾಳನ್ನು ಬಟ್ಟೆಗೆಡಿಸಿದಂತಾಗುತ್ತದೆ. ಇಂಥವುಗಳ ನೇಯ್ಗೆಯಲ್ಲಿಯೂ ಒಂದು ಹೊಂದಿಕೆಯಿದೆ; ಅಂದವಿದೆ; ಆನಂದವಿದೆ. ನೇಯ್ಗೆಯ ಎಳೆಯ ತಪ್ಪಿನಲ್ಲಿ ದುಃಖವಿದೆ; ಉದ್ವೇಗವಿದೆ; ಉದ್ರೇಕವಿದೆ.

ಇಂಥ ಕೆಲವು ಚಿತ್ರಗಳನ್ನು ಇಲ್ಲಿ ಹೆಣೆಯಲು ಯತ್ನಿಸಿದ್ದೇನೆ. ಇಲ್ಲಿನ ವಸ್ತುಗಳು ನನ್ನ ಅನುಭವಕ್ಕೆ ಬಂದವು ಹಲವಾದರೆ ಕಂಡು-ಕೇಳಿದವು ಕೆಲವು. ಈ ಚಿತ್ರಣದಲ್ಲಿ ನನ್ನ ಮನಸ್ಸಿನ ಸಂಸ್ಕಾರಕ್ಕೆ ತಕ್ಕ ಫಲವಿದೆ. ಮನಸ್ಸು ಮುದುಡುವದೇ ರೂಢಿಯಾಗಿರುವ ಈ ಕಾಲದಲ್ಲಿ ಹೆಚ್ಚಿನ ಆಳ, ಎತ್ತರ, ಹರವುಗಳನ್ನು ಬಯಸುವುದು ಸಾಹಸವೇ ಆದೀತೆಂದು ಇದ್ದುದರಲ್ಲಿಯೇ ನಾನು ತೃಪ್ತಿಹೊಂದಿದ್ದೇನೆ.

ನಾನು ಕಥೆ-ಹರಟೆ-ಪ್ರಬಂಧಗಳನ್ನು ಬರೆಯತೊಡಗಿ ಹತ್ತು-ಹನ್ನೆರಡು ವರುಷವೇನೋ ಆಯಿತು. ಆಗ-ಈಗ ಬರೆದವುಗಳನ್ನು ಸಂಕಲಿಸಿ ಪ್ರಕಟಿಸಬೇಕೆಂದು ಸ್ನೇಹಿತರು ಆಗಾಗ ಸೂಚಿಸುತ್ತಿದ್ದರು. ನಾನು ಕಾಲ ಕಾಲಕ್ಕೆ ಬರೆದ ಬರಹಗಳು ಆಗಾಗಿನ ಪತ್ರಿಕೆಗಳಲ್ಲಿ ಪ್ರಕಟವಾದವು. ಆದರೆ ಅವುಗಳು 'ಸಂಗ್ರಾಹ್ಯ' ಎಂದು ನನಗೆ ಅನಿಸಿರಲೇ ಇಲ್ಲವೆಂದು ಸುದೈವದಿಂದಲೋ-ದುರ್ದೈವದಿಂದಲೋ ಅವುಗಳನ್ನು ಕಾಯ್ದಿಡಲಾಗಲಿಲ್ಲ. ಈ ಒಂದು ವರುಷದಲ್ಲಿಯೇ ನಾನು ಅಷ್ಟು ಕಥನಗಳನ್ನು ಬರೆದೆ. ಈಗ ಈ ಸಂಕಲನದ ಯೋಜನೆ ಮಾಡುವಾಗ ಹಿಂದಿನ ಬರಹಗಳನ್ನು ಇವರಲ್ಲಿ ತುಂಬಲು ಒಂದು ಮನಸ್ಸು ಅಪೇಕ್ಷಿಸಿದರೆ ಇನ್ನೊಂದು ಮನಸ್ಸು ಬೇಡವೆಂದಿತು. ಆದರೂ ಸ್ನೇಹಿತರೊಬ್ಬರು ತಮ್ಮಲ್ಲಿ ಸಂಗ್ರಹಿಸಿಟ್ಟ ಎರಡು ಪ್ರಕಟಿತ ಲೇಖನಗಳನ್ನು ಕೊಟ್ಟರು. ಇದೇ ವರ್ಷದಲ್ಲಿ ಬರೆದು ಪ್ರಕಟಿಸಿದ ಮೂರು ಬರಹಗಳು ನನ್ನ ದೃಷ್ಟಿಯಿಂದ ಇನ್ನೂ ಸರಿದಿದ್ದಿಲ್ಲ. ಹೊಚ್ಚ ಹೊಸ ಐದು ಕಥನಗಳೊಡನೆ ಪ್ರಕಟಿತ ಐದು ಬರಹಗಳನ್ನೂ ಸೇರಿಸಿ ಈ 'ಹಾಸು-ಹೊಕ್ಕ'ನ್ನು ಕನ್ನಡತಾಯ ಮಡಲಿಗೆ ಹಾಕಿದ್ದೇನೆ.

'ಪರಿಪಾಕ,' 'ಭಟ್ಟರ ಮದುವೆ,' 'ಋಣಾನುಬಂಧ,' 'ಕಾಯ್ದಿಟ್ಟ ಸ್ಥಳ,' ಮತ್ತು 'ಸಾಹಿತ್ಯ ಭಂಡಾರಿ' ಇವುಗಳು ಕ್ರಮವಾಗಿ 'ನಿರೀಕ್ಷಕ'

‘ಪ್ರತಿಭಾ,’ ‘ಜಯಂತಿ,’ ‘ಜಯಕರ್ನಾಟಕ’ ಮತ್ತು ‘[illegible]’ ಈ ಪತ್ರಿಕೆಗಳಲ್ಲಿ ಈ ಮುಂಚೆ ಪ್ರಕಟವಾಗಿವೆ. ಆಯಾ ಸಂಪಾದಕರನ್ನು ಈ ಸಮಯದಲ್ಲಿ ಕೃತಜ್ಞತೆಯಿಂದ ನೆನೆಯುತ್ತೇನೆ.

ನಾನು ಬರೆಯತೊಡಗುವ ಮೊದಲೇ ಸಂಸ್ಕಾರಗೊಂಡ ಲೇಖಕರಾಗಿದ್ದ ಶ್ರೀ ಮೋವ್ರಂಡಿ ಮಲ್ಲಾರಿಯವರು ನನ್ನನ್ನು ಈ ಕ್ಷೇತ್ರಕ್ಕೆ ಸ್ವಾಗತಿಸಲು ಕಾರಣರಾಗಿದ್ದಾರೆ. ಈ ಪುಸ್ತಕ ಪ್ರಕಟವಾಗುವ ಈ ಸಮಯದಲ್ಲಿ ಅವರ ಮುನ್ನುಡಿಯ ರಕ್ಷೆಯನ್ನು ನಾನು ಸ್ವಾಭಾವಿಕವಾಗಿಯೇ ಅಪೇಕ್ಷಿಸಿದೆ. ಅವರೂ ಅಷ್ಟೇ ಮಮತೆಯಿಂದ ನಾಲ್ಕು ಮಾತು ಬರೆದು ನನ್ನ ಬೆನ್ನಿಗೆ ನಿಂತಿದ್ದಾರೆ. ಅವರಿಗೆ ನನ್ನ ವಂದನೆಗಳು.

ಲಲಿತಸಾಹಿತ್ಯಮಾಲೆಯಲ್ಲಿ ನನ್ನ ‘ಹಂಬಲ’ ಕಾದಂಬರಿ ಪ್ರಕಟವಾಗುವದೆಂದು ಸಾರಲಾಗಿತ್ತು. ನನ್ನ ‘ಹಂಬಲ’ದ ವ್ಯಾಪ್ತಿಯನ್ನು ಒಂದೆಡೆಗೆ ಹಿಡಿದು ಹಾಕಲು ಸದ್ಯಕ್ಕೆ ಸಾಧ್ಯವಾಗಲಿಲ್ಲ. ಅದರ ಸಂಚಕಾರವೆಂದಾದರೂ ಈ ಪುಸ್ತಕ ಕೊಡಲು ಸಮರ್ಥನಾದುದಕ್ಕೆ ನಾನೇ ಆಶ್ಚರ್ಯಪಡುತ್ತೇನೆ. ಮುಂದಿನ ವರುಷದಲ್ಲಿ ನನ್ನ ‘ಹಂಬಲ’ ಹಣ್ಣಾಗಿ ಲಲಿತಸಾಹಿತ್ಯಮಾಲೆಯ ಮೂಲಕ ಕನ್ನಡ ಓದುಗರಿಗೆ ಸಿಗಬಹುದೆಂದು ಆಶಿಸುತ್ತೇನೆ. ಅಷ್ಟನ್ನು ಮಾಲೆಯವರೂ, ಓದುಗರೂ ನಡೆಸಿಕೊಡಬೇಕು.

ನನ್ನ ಸ್ನೇಹಿತರಿಬ್ಬರು ಯಾವುದೋ ಒಂದು ಗಳಿಗೆಯಲ್ಲಿ ನನ್ನಿಂದ ಒಂದು ಕಾದಂಬರಿ ಬರೆಸಬೇಕೆಂದು ನನ್ನನ್ನು ಕೆಣಕಿ ಮಾತು ತೆಗೆದುಕೊಂಡರು. ಅವರೂ ಈ ಸಂಚಕಾರದಿಂದ ನನ್ನನ್ನು ಕ್ಷಮಾರ್ಹನೆಂದು ಭಾವಿಸುವರೆಂದು ನಂಬಿದ್ದೇನೆ. ಇಂಥ ಸ್ನೇಹಜೀವಿಗಳ ರಕ್ಷೆಯಲ್ಲಿಯೇ ನನ್ನ ಬರಹ ಹುಟ್ಟಿದ್ದು; ಬೆಳೆಯುವುದೂ ಅವರಿಂದಲೇ ಎಂದು ನನ್ನ ದೃಢವಾದ ನಂಬುಗೆಯಾಗಿದೆ.

ಅಂತೂ ಈ ಚಿಕ್ಕಪುಸ್ತಕದ ಅವತಾರಕ್ಕೆ ಕಾರಣರಾದ ಈ ಎಲ್ಲರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಧಾರವಾಡ
೩೧-೧೨-೫೦

ದತ್ತಾತ್ರೇಯ ಕುಲಕರಣಿ

ಸಮರ್ಪಣೆ

ನನ್ನ ಬರವಣಿಗೆಯನ್ನು
ಕುತೂಹಲದಿಂದ ಎದುರುಗೊಳ್ಳುವ
**ಸ್ನೇಹಜೀವಿಗಳಿಗೆ**

—ದತ್ತಾತ್ರೇಯ

## ವಿವರ

# ಪಾಸು-ಹೊಕ್ಕು

## ೧

## 'ಇವಳು'

ನಮ್ಮ ಮದುವೆಯಾದಾಗ ಇವಳಿನ್ನೂ ಹೈಸ್ಕೂಲು ತರಗತಿಯಲ್ಲಿ ಓದುತ್ತಿದ್ದಳು. ಹೆಣ್ಣಿಗೆ ವಿದ್ಯಾಭ್ಯಾಸ ಮದುವೆಯ ದಾರಿ; ಮದುವೆ ವಿದ್ಯಾಭ್ಯಾಸದ ಮುಕ್ತಾಯಕ್ಕೆ ದಾರಿಯಾದಂತಿದೆ. ಇವಳ ತಂದೆ ಹಳೆಯಕಾಲದವರು; ಹುಡುಗಿ ದೊಡ್ಡವಳಾದಳೆಂದು ಮದುವೆ ಮಾಡಿ ಬಿಟ್ಟರು. ನಾನು ಸಿದ್ಧನಾಗಿಯೇ ಕುಳಿತಿದ್ದೆ; ಅವರಿಗೇಕೆನ್ನಬೇಕು? ಮಗಳಿಗೆ ಹೆಚ್ಚಿನ ವಿದ್ಯಾಭ್ಯಾಸ ಕೊಡಿಸುವದು ಅವರ ಉದ್ದೇಶವೂ ಆಗಿದ್ದಿಲ್ಲ. ಬಹಳ ಕಲಿತ ಹುಡುಗಿಯರ ಮದುವೆ ಜಡವಾಗುವದೆಂದು ಅವರ ಎಣಿಕೆ. ಹುಡುಗಿಗೆ ಆಯ್ಕೆಯ ಬುದ್ಧಿಬಂದರೂ ಕಷ್ಟ. ಗಂಡು ಅಷ್ಟು ಕಲಿತ ಹುಡುಗಿಯರನ್ನು ವಾಗಿ ಕೈಹಿಡಿಯುವದೂ ಸ್ವಲ್ಪ ಕಷ್ಟವೇ. ಈ ಅಭಿಪ್ರಾಯದ ನಮ್ಮ ಮಾವನವರು 'ಹುಡುಗಿ ಕಲಿತಿದ್ದಾಳೆ' ಎನ್ನುವಷ್ಟು ದಿನ ಕಾಯುತ್ತಿದ್ದವರು ನನ್ನನ್ನು ಹುಡುಕಿ ಬಿಟ್ಟರು. ಎಳೆಯ ಮಡದಿ ದೊರೆತಳೆಂದು ನಾನು ಹಿಗ್ಗು-ತಗ್ಗುಗಳಲ್ಲಿ ಓಲಾಡಿದೆ.

ನಮ್ಮ ಮನೆ ಇವಳು ತುಂಬಿದಾಗ ಇವಳನ್ನು ಇನ್ನೂ ಕೆಲವು ದಿನ ಶಾಲೆಗೆ ಏಕೆ ಕಳಿಸಬಾರದು—ಎಂದು ಯೋಚಿಸಿದೆ. ಮದುವೆಗಾಗಿಯೇ ನಾಲ್ಕಕ್ಷರ ತಲೆಯಲ್ಲಿ ತುಂಬಿಕೊಂಡ ಅವಳು ಒಪ್ಪಲಿಲ್ಲ. ಹೇಗೂ 'ಪಾಸ್' ಆಗಿ ಬಿಟ್ಟಿದ್ದೇನೆ; ಇನ್ನೇಕೆ ವ್ಯಾಸಂಗ-ಪರೀಕ್ಷೆಗಳ ಗೊಂದಲ ಎಂದು ಕೊಂಡಿರಬಹುದು. ನನ್ನ ಮಾತನ್ನು ಚಾಚೂ ತಪ್ಪದೇ ಪಾಲಿಸುತ್ತೇನೆಂದು ಬಂದವಳು ನನ್ನ ಒತ್ತಾಯಕ್ಕೆ ಈಡಾಗಬಹುದಿತ್ತು. ಆದರೆ 'ಮದುವೆಯಾದವಳು ಶಾಲೆ ಓದುವುದೇನು ಚೆಂದ?' ಎಂದು ನಮ್ಮ ತಾಯಿ ತಮ್ಮ ಅಸಮ್ಮತಿಯನ್ನು ಸಾರಿದರು. ಅಲ್ಲದೆ ಮದುವೆಯಾದ ಹುಡುಗಿಗೆ ಶಾಲೆಯಲ್ಲಿ

ಅಂಥ ಗೆಳತಿಯರು ಸಿಕ್ಕಬೇಕಲ್ಲ—ಎಂದು ಇವಳೂ ದನಿ ಎಳೆದಳು. ನಿಜ. ಮದುವೆಯಾದ ಗೆಳತಿಯೇ ಬೇಕಾದರೆ ಶಾಲೆಯಲ್ಲಿ ಸಿಕ್ಕುವುದು ಕಷ್ಟವೇ.

ಇವಳು ಬಂದೀಗ ಮೂರು ವರುಷವಾಯಿತು ಅಷ್ಟೆ. ಇಬ್ಬರು ಮಕ್ಕಳಿಗೆ ತಾಯಾಗಿ ನನಗೆ ತಂದೆ ಪಟ್ಟ ತಂದು ಕೊಟ್ಟಳು. ಹಿರಿಯವ ಶರದ ಅಪ್ಪ ಅನ್ನಲಾರದೆ ಪಪ್ಪ ಅನ್ನತೊಡಗಿದ್ದಾನೆ ನನಗೆ. ಈ ಹಿರಿಯ ಮಗನಿಗೆ ಇವಳು 'ಚಿಕ್ಕ' ಎನ್ನುತ್ತಾಳೆ. ಶಶಿ ಈಗ ಉದಿಸಿಬಂದಿದ್ದಾಳೆ. ಶರದನ ಮುಖದ ಹೋಲಿಕೆ-ನೋಟ, ನಗೆ ಎಲ್ಲಾ ಇವಳಂತೆಯೇ. ಶಶಿಯದು ನನ್ನ ಹಾಗೆ-ಎನ್ನುತ್ತಾಳೆ ಇವಳು. ಅದವಳಿಗೇ ಗೊತ್ತು.

* * * *

ಇದೇ ಬಂದಾಗ ಎಂಥ ಸುಟಿಯಾಗಿದ್ದಳೆನ್ನುತ್ತೀರಿ— ಇವಳು? ಕಾಲು ನಿಂತಲ್ಲಿ ನಿಲ್ಲಬೇಕಲ್ಲ! ಸದಾ ಓಡಾಟ-ಥಕಥೈ ನೃತ್ಯವೇ ಆಗಿತ್ತು. ಈಗಿನ ಹುಡುಗಿಯರು ಕಾಲಿಗೆ ಅಂದುಗೆ ಹಾಕುವದಿಲ್ಲ. ಆದರೆ ನನ್ನ ಕಿವಿಗೆ ಅವಳ ಕಾಲಸಪ್ಪಳದೊಂದಿಗೆ ಏನೋ ಗಿಲ್-ಗಿಲ್ ಕೇಳುತ್ತಿತ್ತು.

ಈಗಲೂ ಹಾಗೇ. ನಮ್ಮ ಮನೆಯ ಅಟ್ಟ ಹತ್ತುವಾಗ ಪಾವಟಿಗೆ ಎಣಿಸಿ ಏರಿದ್ದೇ ಇಲ್ಲ—ಇವಳು. ಎಷ್ಟು ಎಂದು ಕೇಳಿದಾಗ ಆರು ಎನ್ನುತ್ತಾಳೆ! ಇವಳ ಹಾರಿಕೆಗೆ ಹನ್ನೆರಡು ಆರೇ. ಮೊನ್ನೆ ಇಳಿಯುವಾಗ ಶಶಿಯನ್ನು ಹಾಕಿಕೊಂಡೇ ಬಿದ್ದಳು. 'ಅಷ್ಟು ಅವಸರವೇನಿತ್ತೇ-ನಮ್ಮವ್ವ' ಎಂದು ನಮ್ಮವ್ವ ಕೇಳಿದಳು. ನಾನು ಕರೆದಿದ್ದೆ. ಇವಳು ಅದನ್ನು ಹೇಳಬೇಕಲ್ಲ! ಪುಣ್ಯಕ್ಕೆ ಶಶಿಗೆ ಪೆಟ್ಟು ತಾಕಲಿಲ್ಲ. ತನಗಾದ ನೋವನ್ನು ಹುಚ್ಚುನಗೆಯಲ್ಲಿ ಮರೆಮಾಡಿದಳು. ರಾತ್ರಿ ನರಳುವದನ್ನು ಕೇಳಿ—ಸಂಶೋಧಿಸಿದರೆ ಮೊಳಕಾಲು ಕಿತ್ತಿ ರಕ್ತ ಬಂದಿತ್ತು. ಕರೆದ ತಪ್ಪು ನನ್ನದಲ್ಲವೇ? ಉಪಚರಿಸಿದೆ. ನಾನು ಕರೆದೆ. ನಿಜ. ಓಡಿಯಾಕೆ ಬರಬೇಕು ತಾನು? ಕೈಯಲ್ಲಿ ತೂಗುವಿದೆ ಮತ್ತೆ. ನಾನು ಹೊರಗಿನಿಂದ ಬಂದರೆ ಇಷ್ಟೇಕೆ ಆತುರಪಡಬೇಕು? ಬಂದನನೆ ಮಕ್ಕಳನ್ನು ಕರೆಯುವದು ನನ್ನ ವಾಡಿಕೆ. ಶಶಿಯನ್ನು ಕೂಗಿದೆ. ಶಶಿಯ ತಾಯಿ ತನ್ನನ್ನೇ ಕರೆದೆನೆಂದು ಓಡಿಬಂದಳು. ತನ್ನನ್ನು ಕರೆದಿಲ್ಲವೆಂದಾಗನೆಂದು 'ತಿಂಗಳನ ಬಗಲಾಗ ಎತ್ತ್ಯಾಕೋ' ಎಂಬ 'ಚಿಗರಿಗಂಗಳ ಚೆಲುವಿ' ಯಂತೆ ಶಶಿಯನ್ನೊ ತಂದಳು. ಅವ್ವ ಉರಳುವ ಶಶಿಯನ್ನು ಓಡಿಯುವಿದರೆ

ತಲೆಯೋ ಒಡೆಯುತ್ತಿತ್ತು—ಅವಳದು. ಇವಳ ಅವಸರಕ್ಕೆ ಅವ್ವ 'ಪರೀಕ್ಷೆ ಹುಟ್ಟಿದೆಯಾ ತಾಯೀ' ಎನ್ನುತ್ತಾಳೆ.

ಇವಳ ಮುಂದಿನ ಹಲ್ಲೊಂದು ಸ್ವಲ್ಪ ಮೊಟಕಾಗಿದೆ. ಅದೂ ಶಾಲೆಯಲ್ಲಿಯ ಹಾರಿಕೆಯ ಗುರುತಂತೆ. ಕನ್ಯಾ ಪರೀಕ್ಷೆಯ ಸಮಯ ಇವಳು ಬಾಯಿ ತೆರೆದಿದ್ದಳಾದರೂ ನಾನು ನೋಡಿರಲಿಲ್ಲ. ನಾನೂ ಬಾಯಿತೆರೆದೇ ಇವಳನ್ನು ನೋಡುತ್ತಿದ್ದೆನಂತೆ! ಮದುವೆಯ ಸಮಯ ನನ್ನ ತಂಗಿ ಬಂದವಳು ಅಕ್ಷತೆಯ ಮುಂಚೆಯೇ ತಾನು ಪರೀಕ್ಷೆ ಮಾಡಿ ಬಂದು 'ಹಲ್ಲು ಮುರಕಿ' ಎಂದು ವರದಿ ಮಾಡಿದಳು. ನಾನು ಸುಮ್ಮನೆ ಹೇಳುತ್ತಾಳೆಂದಿದ್ದೆ. ನನ್ನ ಕಣ್ಣಿಗೆ ಅದೇ ಉದ್ದೇಶದಿಂದ ನೋಡಿದಾಗ ಕೊಂಚ ಕಂಡಿತು. ನನ್ನ ತಂಗಿಯದೂ ಮುರಕ ಬಹಳ. ಅದು ಬುದ್ಧಿಯದು!

ಕಬ್ಬು ತಿನ್ನಲು ಇವಳಿಗೆ ನಮ್ಮಹಾಗೆ ಸಲೀಸಾಗಿ ಬರುವದಿಲ್ಲ ಇನ್ನು ವಧು ಪರೀಕ್ಷೆ ಮಾಡುವವರು ನನ್ನ ಇದೊಂದು ಸೂಚನೆ ತೆಗೆದು ಕೊಳ್ಳಬಹುದು. ಓದಿಸಿ. ಹಾಡಿಸಿ ನೋಡುವ ಜತೆಗೆ ಒಂದು ಕಬ್ಬು ತಿನ್ನಿಸಿ ನೋಡಿದರೆ ಮುಖದ ವಿವಿಧ ವಿಕಾರಗಳ ದೃಶ್ಯವಲ್ಲದೆ ಹಲ್ಲಿನ ಪರೀಕ್ಷೆಯೂ ಆಗುತ್ತದೆ. ಯತ್ತು ಕೊಳ್ಳುವವರಂತೆ ಹೆಣ್ಣಿನ ಹಲ್ಲು ಎಣಿಸಿ ನೋಡುವದಿದೆಯೇ?

ನಾನು ಹಳ್ಳಿಯಲ್ಲಿ ಇದ್ದು ಅಲ್ಲಿಯ ಬೈಗಳುಗಳನ್ನು ಅಭ್ಯಾಸ ಮಾಡಿದವ. 'ಹಲ್ಲು ಮುರಿಯುತ್ತೇನೆ' ಎಂಬುದು ನನ್ನ ಮೆಚ್ಚಿನ ಬೈಗಳು. ಅದರ ಪ್ರಯೋಗ ಇವಳ ಮೇಲಂತೂ ಮಾಡಲಾರೆ ನಾನು. ನನ್ನ ಬೈಗಳದ ಫಲವಾಗಿ ದೈವ ಇವಳ ಹಲ್ಲು ಮೊಟಕುಮಾಡಿರಬಹುದು. ಈಗ ಸಂಸ್ಕಾರ ಬಲದಿಂದ ಹಾಗೆ ಅನ್ನುವದನ್ನು ಬಿಟ್ಟುಬಿಟ್ಟಿದ್ದೇನೆ.

ಶರದ ಇವಳ ಮಗನಲ್ಲವೇ! ಇವಳಂತೆ ತಾನೂ ಹಾರುವ ಅಭ್ಯಾಸ ಮಾಡಿ ಮುಂದಿನ ಹಲ್ಲನ್ನು ಕಳೆದುಕೊಂಡಿದ್ದಾನೆ.

* * * *

ಬಂದಾಗ ನನ್ನ ತಾಳಕ್ಕೆ ಕುಣಿಯುತ್ತಿದ್ದ ಇವಳು ಈಗಲೀಗ ಯಾಕೋ ಸ್ವಲ್ಪ ಬದಲಾಗಿದ್ದಾಳೆ. ಅಪ್ಪನ ಮಾತು ಗೆರೆಹಾಕಿ ದಾಟುವದಿಲ್ಲ. ನನ್ನ ಮಾತು ಎಂದರೆ ಲಕ್ಷ್ಯ ಅಷ್ಟಕ್ಕಷ್ಟೆ. ನನಗೆ ಸ್ವಲ್ಪ ಸಿಟ್ಟು ಜಾಸ್ತಿ ಎಂದು ಇವಳ ಹೇಳಿಕೆ. ನನ್ನ ಗೆಳೆಯರು ಯಾರೂ ಹಾಗೆ ಹೇಳಿಲ್ಲ. ಅದು ವಾದಗ್ರಸ್ತ

ವಿಷಯ. ಗೆಳೆಯರಲ್ಲಿ ಉಪಚಾರಕ್ಕೆ ನೀವು ಎಳೆದುತಂದ ಸಮಾಧಾನ ನಟಿಸುತ್ತಿರಬೇಕು.—ಎಂದೂ, ನಿಮ್ಮ ಸಿಟ್ಟನ್ನು ಕಾಣದೆ, ಇಲ್ಲವೆ ಕಂಡೂ ಕಾಣದಂತೆ ಇರುವವರು ನಿಮ್ಮ ಗೆಳೆಯರೇ ಅಲ್ಲ ಎಂದೂ ಇವಳ ಹೇಳಿಕೆ.

ಗೆಳೆಯರಲ್ಲಿ ಉಪಚಾರವೇನು ಬಂತು ? ನಾವು ಅನೇಕ ವಿಷಯ ಗಳನ್ನು ಚರ್ಚಿಸುತ್ತೇವೆ. ಭಿನ್ನಾಭಿಪ್ರಾಯವೂ ಬರುತ್ತದೆ. ಆದರೆ ಅದಕ್ಕಾಗಿ ನಾವು ಜಗಳಕಾಯಬೇಕೆ ?

ಇವಳಿಗೆ ನನ್ನ ಸಿಟ್ಟಿನ ಪರಿಚಯವಾಗಲು ಕಾರಣವೂ ಇಲ್ಲದಿಲ್ಲ. ಸಿಟ್ಟು ಸುಮ್ಮನೆ ಬರುತ್ತದೆಯೇ ? ಇವಳು ಒಮ್ಮೊಮ್ಮೆ ಸುಮ್ಮನೆ ಪೀಡೆ ಕೊಡುತ್ತಾಳೆ. ತಮ್ಮ ಅಣ್ಣನಿಗೆ ನಾನು ಕಾಗದ ಬರೆಯಬೇಕಂತೆ ! ಏನು ಬರೆಯಬೇಕು ನಾನು ? ' ಇಲ್ಲಿ ಕ್ಷೇಮ—ನಿಮಗೆ ಕ್ಷೇಮವೇ—ಎಂದಲ್ಲವೆ? ' ನನಗೆ ಹೇಗೆ ಇಷ್ಟುದ್ದ ಬರೆಯುತ್ತೀರಿ '—ಎನ್ನುತ್ತಾಳೆ. ' ನಿನ್ನ ಅಣ್ಣ ಹುಡುಗಿಯಾಗಿದ್ದು ನನ್ನ ಕೈಹಿಡಿದಿದ್ದರೆ ಆಗ ಬರೆಯುತ್ತಿದ್ದೆ ' ಎನ್ನ ಬೇಕಾಯಿತು ನಾನು. ಇವಳ ಅಪ್ಪ ತನಗೆ ನಾಲ್ಕಕ್ಷರ ಹೇಗೂ ಕಲಿಸಿದ್ದಾನೆ. ತಾನೇ ಬರೆದರಾಯಿತು.

ಮೊನ್ನೆ ಶರದನಿಗೆ ಚಿತ್ರಾಕ್ಷರ ತಂದೆ. ಆಟಿಗೆ ತಾ ಎಂದು ಹೇಳಿದ್ದಳು. ಮುಂಬಯಿಗೆ ಹೋದಾಗ ನನ್ನ ಗೆಳೆಯ ತನ್ನ ಮಗುವಿಗೆ ಕೊಂಡದ್ದು ನೋಡಿ ನಾನೂ ಅವನ್ನೇ ತಂದೆ. ಬೇರೆ ಆಟಿಗೆ ಏನು ತರಬೇಕೋ ನನಗೆ ಹೊಳೆಯಲಿಲ್ಲ. ಅದೇನು ಕೆಡಿಸುತ್ತದೆ ? ಇಂದಿಲ್ಲ—ನಾಳೆ ಅವನಿಗೆ ಅಕ್ಷರ ಕಲಿಸಲು ಬರುವದಿಲ್ಲವೆ? 'ದುಡ್ಡು ಹಾಳು!' ಎಂದಳು. ಇವಳೇ ಹೀಗೆಂದರೆ! ನನಗೆ ರೇಗಿಹೋಯಿತು. ' ದುಡ್ಡು ನಿಮ್ಮಪ್ಪನ ಮನೆಯದಲ್ಲ. ' ಎಂದು ಬಾಯಿಗೆ ಬಂತು; ಅಂದು ಬಿಟ್ಟೆ. ಇವಳ ತಂದೆ ನಮ್ಮ ಮದುವೆಯಾದ ವರುಷವೇ ಕಾಲವಾಗಿದ್ದರು. ಬಂತು ಗಂಗಾ–ಯಮುನಾ ಪೂರ. ಅದೆಲ್ಲಿಯ ನೀರೋ ಬೇಸಗೆಯಲ್ಲಿ ಹಿಮ ಕರಗಿದಂತೆ ಇಳಿದು ಬರಬೇಕೇ ?

ನನ್ನ ತಂಗಿಯ ಗಂಡ ನಮ್ಮಪ್ಪನನ್ನೂ ಹೀಗೇ ಶಪಿಸುತ್ತಿದ್ದ. ಗಂಡಸರ ಸಂಸ್ಕಾರವಲ್ಲವೆ ? ನಾನೂ ಹಾಗೇ ಆಡಿದೆ. ಒರಟು, ನಿಜ. ಇವಳ ಪ್ರವಾ ಪೂರ ತಡೆಯಲು ನಾನು ಸಾಷ್ಟಾಂಗವ ಒಡ್ಡು ಹಾಕುವದೊಂದು ಬಾಕಿ ಯಾಯಿತು. ' ನಿಮ್ಮಪ್ಪನ ಹೆಸರು ಇನ್ನು ಎತ್ತುವದಿಲ್ಲ ಮಾರಾಯಳೇ ' ಎಂದರೂ ನಿಲ್ಲಬೇಕಲ್ಲ ಅಳು !

ಏನು ತಪ್ಪಾಯಿತು ? ಬಾಯಿಗೆ ಬಂತು; ಅಂದೆ. ಅವ್ವನೂ ಅವಳ ಪಕ್ಷಕ್ಕೇ ಸೇರಿಕೊಂಡು ' ಒಬ್ಬರ ಮಕ್ಕಳಿಗೆ ಹಾಗನ್ನಬಾರದು. ' ಅಂದಳು. ಯಾರು ಒಬ್ಬರು ? ನನ್ನ ಮಾವನಲ್ಲವೇ ? ನನ್ನ ತಂಗಿಯೂ ಹೀಗೇ ಅಳು-ತ್ತಾಳೆಯೋ—ನನಗೆ ತಿಳಿಯದು. ಈಗ ಆ ಭೂಪ 'ಅಣ್ಣನ ಗಂಟು' ಅನ್ನು ತ್ತಾನಂತೆ. ಅವಳ ಅಣ್ಣನಿಗೆ ಗಂಟು ಇದ್ದರಲ್ಲವೇ ನನಗೆ ಸಿಟ್ಟು ಬರಬೇಕು? 'ನಾನೂ ನಿಮ್ಮ ಅಣ್ಣನ ಗಂಟಿಗೇ ಕೈಹಚ್ಚುತ್ತೇನೇಳು' ಎಂದಾಗ-ಜಡಿಮಳೆ, ಕಪ್ಪುಮೋಡದಲ್ಲಿ ಮಿಂಚಿದಂತೆ ಇವಳ ಊದಿಕೊಂಡು ಕೆಂಪಗಾದ ಮುಖದಲ್ಲಿ ನಗೆ ಉದಯಿಸಿತು. ' ಅಪ್ಪಾ ಗೆದ್ದೆ ' ಎಂದುಕೊಂಡೆ ! ಇದ್ದವ ರನ್ನಂದರೆ ನಷ್ಟವಿಲ್ಲವಲ್ಲ ? ಇದ್ದವರೆಂದರೆ ಉಳ್ಳವರೆಂದೇನಲ್ಲ—ಜೀವಂತ ಇದ್ದರಾಯಿತು.

ನನ್ನ ಗೆಳೆಯನ ಮಡದಿ ಮಹಿಳಾ ಸಮಾಜದ ಕಾರ್ಯದರ್ಶಿನಿ. ಇವ ಳನ್ನು ಸಮಾಜಕ್ಕೆ ಕಳಿಸಬೇಕೆಂದು ಕಾಡಾಗಲೆಲ್ಲ ಹಿಂಸೆಪಡಿಸುತ್ತಾರೆ. ನಾನು ಇವಳಿಗೆ ಹತ್ತುಬಾರಿ ಹೇಳಿದೆ. ' ಸಮಾಜ 'ದವರಿಗೇನು ಚಂದಾ ಕೊಟ್ಟು ಬಿಡಿ " ಎನ್ನುತ್ತಾಳೆ. ಇವಳ ಚಂದಾಕೊಟ್ಟು ' ಮಾಫ್ ಮಾಡಿ ' ಎಂದು ಹೇಳಬೇಕಾಯಿತು ನಾನು. ಆ ಕಾರ್ಯದರ್ಶಿನಿ ಹಿಂದೀ ಶಿಕ್ಷಕಿಯೂ ಅಹುದು. ಹಿಂದೀ—ಅದೊಂದು ಸ್ತ್ರೀ ರೋಗದಂತೆ ಹಬ್ಬುತ್ತಿದೆ ನಮ್ಮಲ್ಲಿ; ಗಂಡಸರಿಗೆ ಇಂಗ್ಲೀಷು ಗಂಟುಬಿದ್ದಂತೆ!

ಮೊನ್ನೆ ಸಮಾಜದ ವಾರ್ಷಿಕೋತ್ಸವವಿತ್ತು. ಆ "ಬಹೆನ್" ಬಿಡ ಬೇಕಲ್ಲ? ಇವಳನ್ನೆಳೆದುಕೊಂಡು ಹೋದರು. ವಿನೋದಾವಳಿಯೂ ಇತ್ತು. ಅಬಲೆಯರೆಂದು ನಮ್ಮ ಸಹಾಯವನ್ನೂ ಬಯಸಿದರು. ಟಿಕೀಟು ಮಾರುವ ಜವಾಬ್ದಾರಿ ಹೊರಿಸಿದರು. 'ಏಕಮಾತ್ರ' ಮಹಿಳಾ ಸಮಾಜಕ್ಕೆ ಗಂಡಸರು ಕೊಡುಗೈಯಿಂದ ಸಹಾಯಮಾಡಬೇಕಂತೆ ! ಕೊಡದ ಕೈಯಿಂದಲೂ ಹಣ ಬಿಚ್ಚಿಸಿದರು. ಜಡಗೈಗಳೂ ಕೊಡುಗೈಗಳಾಗಬೇಕೇ ಈ ಮಹಿಳಾ ಸಮಾಜಕ್ಕೆ ! ಸಮಾಜದ ಚೇತನಾಸ್ವರೂಪ ಹೆಣ್ಣು. ಜಡವೂ ಜಂಗಮ ವಾಗಬೇಕಷ್ಟೆ. ನಿಸರ್ಗ ನಿಯಮ. ಇಲ್ಲವಾದರೆ ಜಡ ಜಂಜಡವಾದೀತು!

ಅಂಥ ವಿನೋದಾವಳಿ ಹೊತ್ತಿಗೆ ನಾನೂ ಇದ್ದೆ. ಪರದೆ ಎಳೆಯಲು ಸಬಲರೇ ಬೇಕಲ್ಲ. ನನ್ನನ್ನೆಲ್ಲಿ ಕಂಡಳೋ ಇವಳು ! ' ನೀವು ಅಂಥ ಕೆಲಸಕ್ಕೆಲ್ಲಾ ಯಾಕೆ ನಿಲ್ಲಬೇಕು ?' ಎಂದು ಆರ್ಭಟಿಸಿದಳು ' ನೀನು ಬರಬೇಕಾಗಿತ್ತು ಪರದೆ ಎಳೆಯಲು ' ಎಂದರೆ "ನಮ್ಮ ನಾಟಕದ ಪರದೆ ನೀವು-ಗಂಡಸರು ಎಂದೋ ಎಳೆದು ಬಿಟ್ಟಿದ್ದೀರಿ. ಇನ್ನೇನು ಬಾಕಿ ! " ಎಂದಳು. ಈ ಮಾತಿಗೇನರ್ಥವೋ!

ನನ್ನ ಗೆಳೆಯ ತನ್ನಾಕೆಯ ಸಂಶಯಕ್ಕೆ ಗುರಿಯಾಗಿ ಗೋಳಾಡುತ್ತಾನೆ. ನನ್ನ ಪುಣ್ಯಕ್ಕೆ ಆ ಒಂದು ಅನಾಹುತವಿಲ್ಲ ಈ ಬಾಬತ್ತಿನಲ್ಲಿ ನನಗೆ 'ಶಾಬಾಸ್‌ಗಿರಿ' ದೊರೆತಂತೇ ಇವಳಿಂದ.

* * * *

ಹುಡುಗಿಯರಿಗೆ ಮರಾಠಿ ಕಲಿಸುವ ರೂಢಿ ನಮ್ಮಲ್ಲಿ ಈವರೆಗೆ ಕೆಲವು ಕಡೆಗೆ ಇತ್ತು. ಇವಳೂ ಮರಾಠಿ ಕಲಿತವಳೇ. ನಾನು ಇವಳನ್ನು ಮೆಚ್ಚಿ. ಇವಳ ಮರಾಠಿ ಕ್ಷಮಿಸಿ ಮದುವೆಯಾದೆನೆನ್ನಿ. ಮನೆಗೆ ಬಂದದಿನವೇ ಕನ್ನಡ ದೀಕ್ಷೆ ಕೊಟ್ಟೆ. ಆ ಮೊದಲೇ ಅವರ ತಂದೆ ತಾಯಿ ನನ್ನ ಕನ್ನಡ ಹುಚ್ಚಿನ ಬಗ್ಗೆ ಅವಳನ್ನು ಎಚ್ಚರಿಸಿದ್ದರಂತೆ! ಮದುವೆಯಲ್ಲಿ ಕನ್ನಡ ಒಗಟಗಳಲ್ಲಿಯೇ ಹೆಸರು ಹೇಳಿದ್ದಳು. ಮನೆಮಾತು ಕನ್ನಡ ಇದ್ದು ಮರಾಠಿ ಕಲಿತಾಕ್ಷಣಕ್ಕೆ 'ಅಹೋ' 'ಯಾಹೋ'! 'ಜಾಹೋ' ಗಳ ಹೋಹೋಕಾರವೇಕಿರಬೇಕು ? ಇವಳಿಗೆ ಕನ್ನಡ ಅಕ್ಷರ ಜ್ಞಾನವಾಗಿತ್ತು. ಒಂದು ಕನ್ನಡ ಪುಸ್ತಕ ಕೊಟ್ಟೆ ಛೆ ! ಎಂಥ ಹಠವಾದಿತನ ! ನಾಚಿಕೆಯೋ , ಅಭಿಮಾನವೋ ಕಾಣೆ. ಒಂದಕ್ಷರ ಓದಿದರೆ ಇಟ್ಟ ಆಣೆ ! ಕಣ್ಣಿನಿಂದಲೇ ಓದಿಕೊಳ್ಳುವಳು. ನನಗೆ ಭರವಸೆಯಾಗಲೆಂದು ಬಾಯಲ್ಲಿ ಸಾರಾಂಶ ಹೇಳುವಳು. ಕನ್ಯಾ ಪರೀಕ್ಷೆಯಲ್ಲಿಯೇ ಓದಿಸಿದ್ದರೇನು ಮಾಡುತ್ತಿದ್ದಳೋ ! ಯಾರೋ ಒಬ್ಬ ಕಲಿತ ಕನ್ನೆಯನ್ನು ಗಂಡಿನವರು ಓದಿಸಿ ನೋಡಬೇಕೆಂದರಂತೆ ' ಕುಣಿದೂ ತೋರಿಸಬೇಕೇನು ? ' ಎಂದು ಕೇಳಿದಳಂತೆ ಅವಳು. ಈಗಿನ ಕಲಿತ ಹುಡುಗಿಯರದು ತಿಳಿಯುವದೇ ಇಲ್ಲ. ಓದುವ ಈ ಅವಾಂತರದಲ್ಲಿ ನಾನೇ ಸೋತು ಅವಳ ಪಾಡಿಗೆ ಅವಳನ್ನು ಬಿಟ್ಟೆ. ಈಗಾಗಲೇ ಒಂದೊಂದಾಗಿ ಕನ್ನಡಪುಸ್ತಕ ತಿರುವಿ ಹಾಕಿದ್ದಾಳೆ. ಸಹಾನುಭೂತಿಗಾಗಿ ನಾನೂ ಮರಾಠಿ ಓದುವ ನಟನೆ ಮಾಡಿದೆ. ನನ್ನದು ನಟನೆಯೇ ಆಯಿತು.

ಮೊನ್ನೆ ನಮ್ಮ ತಾಯಿಯ ಮುಂದೆ ಕನ್ನಡಭಾರತ ಓದುತ್ತಿದ್ದಳು.
ನಾನು ಬಂದೆನೆಂದು ಒಂದು ಕ್ಷಣ ತಡೆದಳು. 'ಯಾಕೆ? ಓದು, ಅವ
ನೇನು ಮಾಡುತ್ತಾನೆಂ'ದು ತಾಯಿ ಹೇಳಿದರು. 'ಓದಲಿ, ಕುಳಿತು
ಕೇಳುತ್ತೇನೆ ನಾನೂ' ಎಂದೆ. 'ನಿನ್ನ ಹುಡುಗಿಯ ಬಾಯಿಂದ
ಲಾದರೂ ಪುರಾಣ ಕೇಳಪ್ಪಾ. ಓದೆಂದರೆ ನೀನಾವತ್ತೂ ಪುರಾಣ ಓದುವು
ದಿಲ್ಲ—ನೀನು ಕಥೆ ಓದುವವ. ಕೇಳು. ಪಾಂಡವರ ಕಥೆ ನಿನ್ನ ಕಿವಿಗೆ
ಅವಳ ಬಾಯಿಂದಲಾದರೂ ಬೀಳಲಿ' ಎಂದರು—ನಮ್ಮ ತಾಯಿ. ಇವಳು
ಧೈರ್ಯವಾಗಿ ಮುಂದುವರಿದಳು. ಕೃತಾರ್ಥನಾದೆ ನಾನು. ಹಿಂದೆ ಅವಳು
ಓದಲಿಲ್ಲವೆಂದು ಕೆನ್ನೆಗೆ ಹೊಡೆದಿದ್ದೆನಂತೆ! ಜಿಂಬು ಮೂಡಿದ್ದವಂತೆ!
'ಅದು ಏನು' ಎಂದು ಅಪ್ಪ ಕೇಳಿದ್ದಳಂತೆ! ಇಂದು ಅದಕ್ಕೆ ಉತ್ತರ
ಹೇಳಿದಳು. ನನ್ನ ಕೆನ್ನೆಗೂ ಚುರುಕು ಕೊಟ್ಟಂತಾಯಿತು.

ಆದರೆ ಅವಳ ಮರಾಠಿ ಎಲ್ಲಿಗೆ ನಿಂತಿದೆಯೋ ನನಗೆ ತಿಳಿಯದು. ನನ್ನ
ಕನ್ನಡಪ್ರಭಾವದಿಂದ ಅದರ ಸಮಾಧಿಯಾಗಿದ್ದರೆ ಮಾತ್ರ ಅದು
ತಪ್ಪು ಕೆಲಸವೇ. ಬಂದ ಒಂದು ಭಾಷೆಯನ್ನು ಯಾಕೆ ಮರೆಯಬೇಕು?
ಈಗಾದರೇನು? ಹೇಗೂ ಕನ್ನಡ ಬಂದಿದೆ ಅದು ಮರೆಯುವವರೆಗೆ ಮರಾಠಿ
ಓದಲಿ. ಪೂರ್ಣ ಕನ್ನಡ ಮರೆತಳೆಂದರೆ ಚಿತ್ರಾಕ್ಷರಗಳಿವೆ. ಮುಂದೆ
ನೋಡೋಣ.

* * * *

ನನಗಿರುವ ದೊಡ್ಡ ಕೊರತೆಯೆಂದರೆ ನನ್ನ ಬರವಣಿಗೆಯಲ್ಲಿ ಇವಳಿಗೆ
ಕುತೂಹಲ ಕಮ್ಮಿ ಎಂದು. ನಾನು ಲೇಖಕನೆಂದು ಅವಳಿಗೆ ಗೊತ್ತು. ತನಗೆ
ನಾನು ಬರೆದ ಪತ್ರಗಳಿಂದಲೇ 'ದೊಡ್ಡ ಲೇಖಕರಾಗಿ ಬಿಟ್ಟಿರಿ' ಎಂದಿ
ದ್ದಳು. 'ಇದು ನಿನಗೆ ದೊಡ್ಡ ಮಾತು!'—ಎಂದು ಹೇಳಿದ್ದೆ. ನನ್ನ ಬರಹಕ್ಕೆ
'ಪ್ರತ್ಯಕ್ಷಫಲ' ಬಂದರೆ ಅದಕ್ಕೆ ಅವಳು ಭಾಗೀದಾರಳಂತೆ! ಆದರೆ ಅವನ್ನು ಓದಿ
ಮೆಚ್ಚಿಕೆ ಸೂಚಿಸಬೇಡವೇ? ಅವಳು ಮೆಚ್ಚುವ ಬರಹ ನನ್ನದು ಹೌದೋ
ಅಲ್ಲವೋ. ಆದರೆ ನನ್ನ ಲೇಖನಗಳನ್ನು ಅನೇಕರು ಮೆಚ್ಚಿ ನನಗೆ ಸ್ನೇಹಿತ
ರಾಗಿದ್ದಾರೆ. ಹೀಗೆಂದರೆ ಇವಳು 'ಅವರಿಗೆ ಚಹಾ ಕೊಡುತ್ತೀರಿ. ಅದಕ್ಕೆ
ಹೊಗಳುತ್ತಾರೆ' ಎನ್ನುತ್ತಾಳೆ—ಕಿಡಿಗೇಡಿ! 'ನಿನಗೆ ನನ್ನನ್ನೇ ಕೊಟ್ಟು

ಕೊಂಡಿದ್ದೇನಲ್ಲವೇ ? ' ಎಂದರೆ ' ನಿಮ್ಮನ್ನೆ ಮೆಚ್ಚಿಲ್ಲವೆ ನಾನು ? ನಿಮ್ಮ ಎಲ್ಲಾ ಹುಚ್ಚು ಮೆಚ್ಚಿದಂತಾಯಿತು.' ಎನ್ನುತ್ತಾಳೆ. ಉಪಾಯವಿಲ್ಲ. ಅವಳು ಕದ್ದು ನನ್ನ ಬರೆಹ ಓದುತ್ತಾಳೆ—ನಾನು ಬಲ್ಲೆ. ಕದ್ದು ಮೆಚ್ಚಿಗೆ ತೋರು ತ್ತಿರಬಹುದು ಪ್ರಕಟವಾದ ಮಾತಿನ ಮೆಚ್ಚಿಗೆಯಾದರೂ ನನಗೇಕೆ ?

* * * *

ಇವಳಿಗೆ ಸಿನೆಮಾದ್ದೊಂದು ಹುಚ್ಚು. ನನ್ನ ಕಿರಿ ತಮ್ಮ ಇವಳ ರಾಯಭಾರಿ. ಸಿನೆಮಾ ಯಾವದು ಎಲ್ಲಿದೆ ಎಂಬ ಸಂದೇಶಕಾರನಾತ ಬಾರಿ ಸುವದೇನಾದರೂ ಬಂದರೆ ಇವಳೂ ಕಿಟಕಿಯಲ್ಲೇ ನೋಡಿ ಗೊತ್ತುಮಾಡಿ ಕೊಂಡಿರುತ್ತಾಳೆ. ಯಾವುದರಲ್ಲಿ ಯಾರು ಪಾತ್ರಧಾರಿಗಳೆಂಬದೂ ಇವಳಿಗೆ ಗೊತ್ತು ಆದರೆ ಎಲ್ಲಾ ನೋಡುವದು ಆಗಬೇಕಲ್ಲ! ಪುರಾಣದ್ದು ಬಂದರೆ ಅವ್ವ ಇವಳನ್ನೂ ಕರೆದೊಯ್ಯುತ್ತಾಳೆ. ನ್ಯಾಥಿಯೇಟರ್ಸದ್ದು ಬಂದರೆ ನಾನು ಹೋಗುವವ. ಆಗ ಕರೆದರೆ ಉಪಚಾರಕ್ಕೆ ಒಲ್ಲೆನೆನ್ನುತ್ತಾಳೆ. 'ಅವ್ವ ನನ್ನೂ ಹೊರಡಿಸಿ ' ಎಂಬ ಸೂಚನೆಯದು. ಅವ್ವ ಅಂಥದಕ್ಕೆ ಬರುವದಿಲ್ಲ. ಆವಳು ಬಾಯಿ ಬಿಟ್ಟು ' ಇಬ್ಬರೂ ಹೋಗಿ ' ಎನ್ನಬೇಕು. ಆಗ ಉಟ್ಟಸೀರೆ ಯಲ್ಲೇ ಹೊರಡುತ್ತಾಳೆ.

ಶರವನ ಹೆರಿಗೆಗೆ ತವರಿಗೆ ಹೋಗಿದ್ದಳು. ಮೂರು ತಿಂಗಳು ಕಳೆದ ಮೇಲೆ ನಾನು ಕರೆಯಲು ಹೋಗಿದ್ದೆ. ಗುಡಿಗೆ ಹೋಗಿಬಂದ ದಿನವೇ ಸಿನೆ ಮಾಕ್ಕೆ ಹೋಗೋಣವೆಂದಳು ಅವರ ಮನೆಯಲ್ಲಿ ಒಂದು ಮುದುಕಿಯಿತ್ತು ಅದು ಮಗುವನ್ನು ನಾವು ಕರೆದುಕೊಂಡು ಹೋಗುವುದಕ್ಕೆ ಒಪ್ಪಲಿಲ್ಲ. ನಾವಿಬ್ಬರೇ ಹೋಗಬೇಕಾಯಿತು. ' ಜವಾಬ್ ' ಚಿತ್ರವಿತ್ತು. ನನಗೆ ಆ ಚಿತ್ರವೆಂದರೆ ಹುಚ್ಚು. ಆದರಲ್ಲೂ ಒಬ್ಬ ಹುಚ್ಚನಿದ್ದಾನೆನ್ನಿ ನಡುವೆ ಇವಳಿಗೆ ಮಗುವಿನ ನೆನಪಾಯಿತು. ನಾನು ಚಿತ್ರದಲ್ಲಿ ತಲ್ಲೀನನಾಗಿದ್ದೆ. ಇವಳು ತಿವಿದು ಎಚ್ಚರಿಸಿದಳು; ' ಮನೆಗೆ ' ಎಂದಳು. ಅಯ್ಯೊ, ಹುಚ್ಚಿ, ಮೂರು ತಿಂಗಳು ಸಿನೆಮಾ ನೋಡಿಲ್ಲ, ಪೂರ್ತಿನೋಡು ' ಎಂದೆ. ಎರಡು ನಿಮಿಷ ನೋಡಲೆತ್ನಿಸಿದಳು. ಸಾಧ್ಯವಾಗದೆ ಎದ್ದು ನಿಂತಳು. ಮಧ್ಯೆ ಬಿಟ್ಟೇಳಲು ನನಗೆ ಮನಸ್ಸಿಲ್ಲ. ನಿರ್ವಾಹವಿಲ್ಲದೆ ಎದ್ದೆ. ಮನೆಗೆ ಬರುವಾಗ ಶರದ ಹಸಿದ ಹುಲಿಯಾಗಿದ್ದ. ಈ 'ಪುಣ್ಯಕೋಟಿ'ಯನ್ನು ತಿನ್ನದೆ ಬಿಟ್ಟಾನೆ ಅವನು ?

ಅಂದಿನಿಂದ ಇವಳಿಗೆ ಸಿನೆಮಾ ಎಂದರೆ ಎಡಜೆಡವೇ. ಅಪ್ಪನಿದ್ದರೆ ಮಗುವನ್ನು ಸಂಭಾಳಿಸುತ್ತಾಳೆ. ಇವಳೊಬ್ಬಳಿಗೇ ಅವನನ್ನು ಹಿಡಿಯುವದು ಕಷ್ಟ. ನನ್ನಕೂಡ ಈಗ ಬರುವದು ಅಪರೂಪ. ತಾನೂ “ಪ್ರಾಣಪ್ರಿಯ” ಳಾಗಿದ್ದಾಳೆ.

ಮೊನ್ನೆ ‘ಛೋಟಾ ಭಾಯಿ’ ಬಂದಿತ್ತು. ಇವಳು ಆ ಕಥೆ ಓದಿದ್ದಾಳೆ. ಎಲ್ಲರಿಗೂ ತೋರಿಸಬೇಕೆಂದು ನನ್ನಾಸೆ. ಒಮ್ಮೆ ಎಲ್ಲರನ್ನೂ ಹೊರಡಿಸಿದೆ. ನಮ್ಮ ರಥ ಎಳೆದುಕೊಂಡು ಹೋಗುವಾಗ ಟಿಕೆಟು ಸಿಗಬೇಕಲ್ಲ! ‘ಉಫೋ ಲಕ್ಷ್ಮಣಾ” ಎಂದು ತಿರುಗಿ ಬಂದೆವು. ಮರುದಿನ ನಾನೊಬ್ಬನೇ ಹೋಗಿ ಬಂದೆ. ರವಿವಾರದ ಹಗಲಿನಾಟಕ್ಕೆ ಇವರನ್ನು ಕಳಿಸಿದೆ. ಜತೆಗೆ ನಾನು ಹೋಗಿದ್ದೆನೆನ್ನಿ. ನನ್ನ ಕಿರಿತಮ್ಮ ಆ ರಾಮುಲಾಲನಂತೆಯೇ ಉದಾರ. ಈ ಅತ್ತಿಗೆಗೆ ಆ ನಾರಾಯಣಿಯಂತೆಯೇ ಪ್ರೀತಿ. ನನಗೆ ಶ್ಯಾಮುಲಾಲನಂತೆ ಸಿಟ್ಟು ಎನ್ನುತ್ತಾಳೆ ಇವಳು! “ಹಾಗಾದರೆ ನಿನ್ನ ತಾಯಿ ನನಗೆ ಪಾಠ ಹೇಳಬೇಕಲ್ಲ!” ಎಂದಾಗ ಬಾಯಿ ಮುಚ್ಚಿದಳು. ಬಾಯಲ್ಲೇ ಹೇಳುತ್ತಾಳೆ: “ಮೇರಾ ಕೌನ್ ಠಿಕಾನಾ” ಎಂದು. “ಬಾಡಿಗೆಮನೆ” ಎಂದು ನಾನು ಹೇಳಿದ್ದು ಕೇಳಬೇಕಲ್ಲ! ‘ಜಗಮೇ’ ಎಂದು ದನಿ ಎಳೆಯುತ್ತಾಳೆ.

* * * *

ಇವಳಿಗೆ ಇನ್ನೊಂದು ಚಪಲವೆಂದರೆ ತವರುಮನೆ. ಅದನ್ನು ಬಿಡಿಸುವದು ಸಾಧ್ಯವಾಗಲಿಕ್ಕಿಲ್ಲ. ಮುಂಚೆಮುಂಚೆ ನಾನೂ ಬೆನ್ನು ಹತ್ತಿ ಹೋಗುತ್ತಿದ್ದೆ. ಈಗ ಅದು ಚಂದವಲ್ಲವೆಂದು ಬಿಟ್ಟಿದ್ದೇನೆ. ಇವಳು ಹೋದರೆ ಮಕ್ಕಳಾದರೂ ಇರಬೇಕು ನನಗೆ. ಮನೆಗೆ ಬಂದಾಗ ಮಕ್ಕಳೇ ಎದುರು ಬರಬೇಕು. ಮಕ್ಕಳ ನೆವದಿಂದ ಇವಳೂ ಎದುರುಗೊಳ್ಳುತ್ತಾಳೆ. ಅದು ನನ್ನ ಉದ್ದೇಶವೆಂದು ಅವಳೆಣಿಕೆ. ಇವಳ ತವರುಮನೆ ನನಗೆ ಸನ್ಯಾಸವನ್ನೇ ತರುತ್ತದೆ. ಶರದನನ್ನು ಬಿಟ್ಟು ಹೋಗೆಂದರೆ ತಾನೂ ಬಿಡುತ್ತಾಳೆಂದು ಯುಕ್ತಿಸುತ್ತೇನೆ. ಅವಳಿಗಂತೂ ಶರದನನ್ನು ಬಿಟ್ಟು ಅಗಲುವದು ಸಾಧ್ಯವೇ ಇಲ್ಲ. ಅಪ್ಪನ ವಶೀಲಿ ಹಚ್ಚುತ್ತಾಳೆ. ಅಂತೂ ಆಗಾಗ ನನಗೆ ಈ ವನವಾಸ ತಪ್ಪಿದ್ದಿಲ್ಲ. ಯಕ್ಷ ಶಪಿತವರ್ಷ ಕಳೆದಂತೆ ನನ್ನ ಪಾಡು.

* * * *

ಬರೆಯುವ ಗುಂಗು ಬಂದಾಗ ಒಮ್ಮೊಮ್ಮೆ ಅನಿಸುತ್ತದೆ: ಇವಳು ತವರಿಗೆ ಹೋದಾಗ ಬಿಡುವಿರುತ್ತದೆ; ಆಗ ಬರೆದರಾಯಿತು ಎಂದು. ಆದರೆ ಇವಳು ಎದುರಿಗಿಲ್ಲವಾದರೆ 'ಬರಿದೋ ಬರಿದು, ತೆರವೋ ತೆರವು' ಬರೆಯಲಾಗದನ ಬುದ್ಧಿಯು ಮೂಲಾ—ಆಗಿಬಿಡುತ್ತದೆ. ಎಲ್ಲಾ ಭಣಭಣ!

ಬರೆದರೇನು-ಬರೆಯದಿದ್ದರೆ ತಾನೆ ಏನು? ಇವಳು ಎದುರಿಗಿದ್ದರೆ ಏನೋ ಸೃಷ್ಟಿಕಾರ್ಯ ನಡೆಯುತ್ತಿರುತ್ತದೆ. ಅದೇ ನನ್ನ ಜೀವನಕಾವ್ಯ!

# ೧

## 'ಇವರು'

'ಇವರು' ಇತ್ತೀಚೆ ಯಾಕೋ ಬದಲಾಗಿ ಹೋಗಿದ್ದಾರೆ. ನನ್ನನ್ನು ಕಂಡರೆ ಇವರಿಗೆ ಸೇರಿಕೆಯೇ ಇಲ್ಲ. ನನ್ನ ಕೆಲಸದಲ್ಲಿ ಸದಾ ಛಿದ್ರ ಹುಡುಕುತ್ತಾರೆ. ಮಕ್ಕಳನ್ನೂ ಮುಂದೆ ಕರೆಯುವದಿಲ್ಲ. ಮನೆಯಲ್ಲಿ ಮಾತೇ ಇಲ್ಲ. ಆಡಿದ್ದೂ ಗುಂಡುಹಿಡಿದಂತೆ ಒಂದೆರಡು ಮಾತು. ಅದೂ ನನ್ನ ಕ್ರಿಯಾಲೋಪದ ಅಣಕ. ಬೆಳಗ್ಗೆ ನಾನೇಳುವ ಮುನ್ನ ಎಂದೂ ಎದ್ದವರಲ್ಲ. ಈಗ ನನ್ನೊಡನೆಯೇ ಏಳುತ್ತಾರೆ. ನಾನು ಕೆಳಗೆ ಕೆಲಸಕ್ಕೆ ಹೋದರೆ ಕೆಮ್ಮಿ ತಾವು ಎಚ್ಚರ ಇದ್ದುದನ್ನು ಸಾರುತ್ತಾರೆ. ಹೌದು; ಇವರು ಎದ್ದಿದ್ದಾರೆ ನಾನು ನೋಡಿಯೇ ಇದ್ದೇನೆ. ಈ ಕೆಮ್ಮು ಯಾಕೆ ? ಅದೇನೋ ಎಷ್ಟು ಬರೆಯುತ್ತಾರೆ. ಬರೆದುದನ್ನು ಹರಿದುಹಾಕುತ್ತಾರೆ. ಹರಿದಹಾಳೆಯದೊಂಡ ರಾಶಿಯೇ ಬಿದ್ದಿದೆ.

ಮೊನ್ನೆ ಆ ರಾಶಿಯ ಒಂದು ಚೂರು ಎತ್ತಿ ನಾನು ಮಗುವಿನ ಮಲ ಹೊತ್ತು ಹಾಕಿದೆ; ಮತ್ತೆರಡು ಚೂರು ಒಲೆ ಹೊತ್ತಿಸಲು ಉಪಯೋಗಿಸಿದೆ. ಬಂತೊಂದು ಸಿಡಿಲು : 'ನನ್ನ ವಸ್ತು ಇಟ್ಟಲ್ಲಿ ಇರುವದಿಲ್ಲ' ಎಂದು. ಈ ಹರಿದ ಹಾಳೆ 'ಇಟ್ಟ ವಸ್ತು'ವೆಂದು ನನಗೇನು ಗೊತ್ತು ? ತಾವು ಮಾತ್ರ ಹಜಾಮತಿಗೆಂದು ಅದೇ ಚೂರು ಉಪಯೋಗಿಸುತ್ತಾರೆ. ಅಲ್ಲಿಯೇ ತಿನಿಸು ಕೊಟ್ಟರೆ ತಿಂದು ಕೈಯ ಹೆಡಸು ವರೆಸಲು ಅದನ್ನೇ ಎತ್ತಿಕೊಳ್ಳುತ್ತಾರೆ. ಆಗ ಇಟ್ಟ ಈ ವಸ್ತು ಎಲ್ಲಿ ಉಳಿಯುತ್ತದೆ ? ನಾನು ಮಾತ್ರ ಕೆಲಸಕ್ಕೆ ಬಾರದ್ದೆಂದು ಎತ್ತಿಕೊಂಡರೆ ಈ ಗುಡುಗು ಸಿಡಿಲುಗಳೇಕೆ? ನಾನೇ ಕೆಲಸಕ್ಕೆ ಬಾರದಳವಳಾಗಿದ್ದೇನೆ ಇವರಿಗೆ.

ನಿನ್ನೆ ಆ ಹರಿದಹಾಳೆ ಹೊಂದಿಸಿ ನೋಡುತ್ತಿದ್ದರು. ನೋಡುವದಿದ್ದರೆ ಯಾಕೆ ಹರಿಯಬೇಕು? ಇವರು ಬರೆದು ಇಟ್ಟ ಇಂಥ ಹಾಳೆಗಳದು ಒಂದು

ರಾಶಿಯೇ ಇದೆ. ಅವರಲ್ಲಿ ಇದನ್ನು ಹಾಕಿಬಿಡಬೇಕು ! ‘ ಆಡೋಣ ಬಾ, ಕೆಡಿಸೋಣ ಬಾ ’ ಎಂಬಂತೆ ಈ ಹರಿದಾಟವೇಕೆ ?

* * * *

ಇಷ್ಟು ದಿನ ಮುದ್ದುಮಾಡಿ ನನ್ನನ್ನು ಎತ್ತಿ ಕಟ್ಟುತ್ತಿದ್ದ ಇವರು ಇಂದು ಚಿಲ್ಲರೆ ಕಾರಣಗಳಿಗೆ ನನ್ನನ್ನು ‘ಅಗಸಿ ಬಾಗಿಲಿಗೆ’ ಕಟ್ಟುತ್ತಿದ್ದಾರೆ. ನಾನು ಬೆಳಗ್ಗೆ ಚಹಾಮಾಡಿ ಕೊಡುವದಿಲ್ಲ—ಎಂದು ತಮ್ಮ ತಾಯಿಯ ಮುಂದೆ ಇವರ ದೂರು ! ನಾನು ಮಾಡದೆ ಎಂದು ಚಹಾ ಆಗಿದೆ? ಎಲ್ಲರೂ ಏಳುವದು ಏಳು ಗಂಟೆ. ಚಹಾ ಏಳೂವರೆಗೆ ಎಲ್ಲರ ಬಾಯಿಗೂ ಬೀಳುತ್ತದೆ. ತಮಗೆ ಆರಕ್ಕೆ ಬೇಕಾದರೆ ಬಾಯಿಬಿಟ್ಟು ಹೇಳಬೇಕು ? ಹಾಲಿನವ ಆರೂವರೆಗೆ ಬರುತ್ತಾನೆ. ಸಂಜೆಕೊಡುತ್ತಿದ್ದ ಇನ್ನೊಬ್ಬನ ಕೂಡ ಸುಮ್ಮನೆ ಜಡಿ ಮಾಡಿ ಬಿಡಿಸಿ ಬಿಟ್ಟರು. ಅವನು ನೀರು ಕೂಡಿಸುತ್ತಾನೆಂದು ಒದರಾಡಿದರು. ಯಾರು ಕೂಡಿಸುವದಿಲ್ಲ ? ಹಾಲು ನೀರಿನೊಡನೆ ಒಂದಾಗಿ ಬೆರೆಯುತ್ತದೆ; ಕೂಡಿಸುತ್ತಾರೆ. ಈ ಆರೂವರೆಗೆ ಬರುವವ ಒಳ್ಳೇಹಾಲು ತರುತ್ತಾನೇನು ? ಆರು ಕಪ್ಪು ಚಹಾಕ್ಕೆ ಮೂರು ಕಪ್ಪು ಹಾಲು ಹಾಕಬೇಕು. ಸಕ್ಕರೆ ಪ್ರತಿ ಆರೇ ಕಪ್ಪಿನ ಆಳತೆಹಾಕಿ ಒಮ್ಮೆ ತಾವು ಮಾಡಿದ ಚಹಾ ತಿಳಿನೀರಾದದ್ದು ತಾವೇ ಕುಡಿದಿದ್ದಾರೆ. ಹಾಲಿಗೆ ಪ್ರತಿ ಸಕ್ಕರೆ ಬೇಡವೇನು—ಆರು ಕಪ್ಪು ನೀರು ಒಂಬತ್ತು ಕಪ್ಪು ಚಹಾ ಆಗಬೇಕಾದರೆ ?

* * * *

ಮನೆಯಲ್ಲಿ ಸಾಮಾನಿಲ್ಲ ಎಂದು ಹೇಳಬಾರದೇ ನಾನು ? ಒಂದಿಲ್ಲವಾದರೆ ತಮಗೆ ನಡೆಯುವದಿಲ್ಲ. ಮಧ್ಯಾಹ್ನಕ್ಕೆ ಹೇಳದೆ ಕೇಳದೆ ನಾಲ್ಕು ಜನರನ್ನು ಊಟಕ್ಕೆ ಕರೆದುತರುತ್ತಾರೆ. ನಾನು ಏನು ಬಡಿಸಬೇಕು ? ನನ್ನೊಬ್ಬಳ ಪಾಲಿನ ಅನ್ನ ಅವರ ಮಿತ್ರರಿಗೆ ಸಾಕೇನು ? ಮತ್ತೆ ಅಡಿಗೆ ಆಗಬೇಕೆಂದರೆ ಮೂಗಿನ ತುದಿಯಲ್ಲೇ ಸಿಟ್ಟು ! ‘ ಇದ್ದಷ್ಟು ಹಾಕು ’ ಅಂದರೆ ಹೊರಗಿನವರು ಬಂದಾಗ ಹೇಗದು ಹಾಕುವದು ? ಯಾರಾದರೂ ಮನೆಗೆ ಬಂದರೆ ನಿನಗೆ ಸೇರಿಕೆಯಿಲ್ಲ—ಎನ್ನುತ್ತಾರೆ. ಇಷ್ಟು ಜನ ಸೇರುತ್ತಾರೆ ಮಧ್ಯಾಹ್ನದ ಊಟಕ್ಕೆ ಎಂದು ತಿಳಿದರೆ ನನ್ನ ಗಂಟೇನು ಹೋಗುತ್ತದೆ ? ಮಾಡುವ ಕೈಯಲ್ಲಿ ಮತ್ತಷ್ಟು ಮಾಡಿ ಬಡಿಯುತ್ತೇನೆ. ತಾವು ಮಿತ್ರರ ಮನೆಗೆ

ಹೋದಾಗ ಅಷ್ಟು ಅತಿಥ್ಯ ಮಾಡುತ್ತಾರೆ; ಇಷ್ಟು ಆದರ ಮಾಡುತ್ತಾರೆ ಎನ್ನುತ್ತಾರೆ. ಆ ಗಂಡಸರು ಮನೆಯವಳಿಗೆ ಹೇಳಿಕಳಿಸದೇ ಅವಳು ಮಾಡಿ ಇಡುತ್ತಾಳೆಯೇ ಪಕ್ವಾನ್ನ ?

ಎಂಟು ದಿನದ ಹಿಂದೆ ಮೈಸೂರವರಂತೆ—ಒಬ್ಬರು ಇವರ ಕೂಡ ಬಂದರು. ಬರುತ್ತಾರೆಂದು ಹೇಳಿಕಳಿಸಿದ್ದರು ಪುಣ್ಯಕ್ಕೆ. ಬಂದವರು ಸ್ನಾನ ಮಾಡಿ ಸಂಧ್ಯಾವಂದನೆ ಮಾಡಿದರು. ಇವರು ತಾವೂ ಮಾಡುವಂತಿಲ್ಲ; ಅವರನ್ನೂ ಮಾಡಗೊಡಲಿಲ್ಲ. ನಡುನಡುವೆ ಮಾತಾಡಿಸಿದರೆ ಅವರೇನು ಮಾಡಬೇಕು ? ಮೈಸೂರು ಶುದ್ಧ ಕನ್ನಡವಂತೆ ! ಆದರೆ ಸಂಸ್ಕೃತ ಸಂಧ್ಯಾ ವಂದನ, ಇಂಗ್ಲೀಷು ಸಂಭಾಷಣೆ! ನಮ್ಮ ಅತ್ತೆ 'ಮೈಸೂರ ಕಡೆಗೆ ಇಂಗ್ಲೀಷು ಸಂಧ್ಯಾನವೇನೋ ತಮ್ಮಾ' ಎಂದು ಕೇಳಿದರು ಇವರನ್ನು. ಇವರು 'ಇಂಗ್ಲೀಷ ಸಂಧ್ಯಾನ' ಎಂದು ಹೇಳಬೇಕೇ ?

ನಾನು ಮಾಡಿದ ಅಡಿಗೆ ಆ ಪ್ರಾಣಿಗೆ ಸೇರಬೇಕಲ್ಲ—ಎಲ್ಲಾ ಎಲೆತುದಿಗೆ ಸರಿಸಿಹಾಕಿದರು. ಒಂದಿಷ್ಟು ಅನ್ನ ಮಜ್ಜಿಗೆ ಕಿವುಚಿ ಉಂಡೆದ್ದರು. ನಾವೇನು ಮಾಡಬೇಕು ತಾಯೀ. ಅಂದು ಬೇಳೆ ಕುಚ್ಚಿ ಜೀರೆ ಸಾರು ಮಾಡಿದ್ದೆ. ಮೆಂತೆದ ಬೇಳೆಯ ತೊವ್ವೆ ಮಾಡಿದ್ದೆ. ಕೊಬ್ಬರಿ ಚಟ್ಣಿ ಕುಟ್ಟಿದ್ದೆ. ಚಪಾತಿ, ಬಾಳೇಹಣ್ಣಿನ ಸೀಕರಣಿ ಮಾಡಿದ್ದೆ. ಒಂದೂ ತಿನ್ನಲಿಲ್ಲ ಆ ಪ್ರಾಣಿ. ಎಲ್ಲದರಲ್ಲಿ ಬೆಲ್ಲ ಹಾಕಿದ್ದೀರಿ ಎಂದರು. ಹೌದು; ಬೆಲ್ಲವೇನು ಬೇವೇ ? ಮೈಸೂರವರು ಬರುತ್ತಾರೆಂದು ಹೇಳಿಕಳಿಸಿದ್ದೆ— ಎಂದು ಇವರ ಅರ್ಭಾಟಿ. ಹೌದು; ಬೆಲ್ಲ ಹಾಕಬಾರ ದೆಂದು ನನಗೇನು ಗೊತ್ತು ?

ಇಷ್ಟು ಮೈಸೂರ ಮಿತ್ರರಿದ್ದಾರೆ. ದಸರಾ ಉತ್ಸವವಾಗುತ್ತದಂತೆ. ತಾವು ವರುಷಕ್ಕೊಮ್ಮೆ ಹೋಗುತ್ತಾರೆ. ನಮ್ಮನ್ನು ಒಮ್ಮೆಯಾದರೂ ಕರೆದು ಕೊಂಡು ಹೋಗಬೇಕು ತಾವು ? ನಮಗೂ ನೋಡುವ ಆಸೆ ಇಲ್ಲವೇನು ? ಮೊನ್ನೆ ಬಂದ ಎಂಥದೋ ಅಯ್ಯ 'ಒಮ್ಮೆ ಬಂದು ಹೋಗಿ ಅಮ್ಮಾ' ಎಂದು ಹೇಳಿದರು. ಇವರೂ ಎದುರಿಗೇ ಇದ್ದಾರೆ—'ಅಮ್ಮಾ' ಎನ್ನುತ್ತಾರೆ ನನಗೆ. ಅವರ ಕಡೆಗೆ ಹಾಗೇ ಅಂತೆ. ತಿಳಿಯೊಲ್ಲದೇಕೆ ! ನಾನೇ ಒಮ್ಮೆ

ಮೈಸೂರು ನೋಡಿಬಂದೆ ಅಲ್ಲಿ ಹೀಗೆ ಎಂದು ಹೇಗೆ ನಂಬಲಿ? ನಾನೂ ಹೇಳಿದೆ—' ನಿಮ್ಮ ಮನೆಯವರನ್ನೂ ಒಮ್ಮೆ ಕಳಿಸಿರಿ " ಎಂದು. ಯಾರಾದರೂ ಬರಲಿ—ನಾನೂ 'ಅಮ್ಮಾ' ಎಂದೇ ಅನ್ನುತ್ತೇನೆ. ಏನೆನ್ನುತ್ತಾರೋ ನೋಡೋಣ.

* * * *

ನನ್ನ ಅಣ್ಣಂದಿರು ಇಷ್ಟು ಪತ್ರ ಬರೆಯುತ್ತಾರೆ. ಅವರಿಗೊಂದು ಉತ್ತರ ಬರೆಯಬೇಕು ಇವರು ? ನಾನು ಈ ಮನೆಗೆ ಬಂದು ಮೂರು ವರುಷವಾಯಿತು. "ನಿನ್ನ ಗಂಡನಿಂದ ಒಂದು ಕಾಗದ ಬರೆಸು ಲೀಲಿ. ನಿನಗೆ ಒಂದು ನಾಗಪುರಿ ಸೀರೆ"—ಎಂದು ನನ್ನ ಹಿರಿಯಣ್ಣ ಹೇಳುತ್ತಾನೆ. ಅವರು ಕೊಡುವಷ್ಟು ಕೊಟ್ಟಿದ್ದಾರೆ; ಕೊಡುವಾಗ ಕೊಡುತ್ತಾರೆ. ಆದರೆ ಇವರಿಗೆಂಥ ಜಂಬ ! ದಿನಾ ಹತ್ತಿಪ್ಪತ್ತು ಪತ್ರ ಬರೆಯುತ್ತಾರಂತೆ—ಅದರಿಂದ ಸವಡಾಗುವದಿಲ್ಲವಂತೆ! ನಾನೂ ಕೇಳಿದೆ ಒಮ್ಮೆ: ಒಂದಿನ ಒಂಬತ್ತು ಜನಕ್ಕೆ ಬರೆದು ಅಣ್ಣನಿಗೊಂದು ಪತ್ರ ಏಕೆ ಬರೆಯಬಾರದು—ಎಂದು. ಅವರಿಗೆ ಕನ್ನಡ ಬರೆದರೆ ತಿಳಿಯುವದಿಲ್ಲವಂತೆ ! ಇಂಗ್ಲೀಷು ಬರೆಯಬೇಕು ? ಮದುವೆ ಆದೇ ಆವಾಗ ನನಗೆ ಇಂಗ್ಲೀಷಿನಲ್ಲಿ ಬರೆದಿದ್ದರು. ನನಗೆ ಮಾತ್ರ ಬರೆಯಲು ಇವರಿಗೆ ಇಂಗ್ಲೀಷು ಸಾಕೇನು ? ನನ್ನ ಅಣ್ಣಂದಿರ ಇಂಗ್ಲೀಷು ರೇಲ್ವೇ ಇಂಗ್ಲೀಷಂತೆ! ಇವರದು ಯಾತರದು ? ಇವರು ಬರೆದದ್ದೆಲ್ಲ ನನಗೆ ತಿಳಿಯದೆ ಅಣ್ಣನಿಗೆ ತೋರಿಸಿದ್ದೆ ನಾನು; ಅವನು ನನ್ನ ಇಂಗ್ಲೀಷ ಗುರು ಮನೆಯಲ್ಲಿ. ಮೂರುವರುಷದ ಹಿಂದಿನಮಾತದು. ಅವನು ಓದಿ ನಗಹತ್ತಿದ. ಏನು ಬರೆದಿದ್ದಾರೆ ಎಂದು ನನ್ನ ಅಪ್ಪ ಕೇಳಿದರೆ "ಎಲ್ಲಾ ಹುಚ್ಚು-ಹುಚ್ಚು" ಎಂದ ಅಣ್ಣ. ಅಂಥವರು ತಾವು–ರೇಲ್ವೇ ಇಂಗ್ಲೀಷೆಂದು ಹಾಸ್ಯಮಾಡುತ್ತಾರೆ!

ಒಬ್ಬ ಅಣ್ಣ ಇವರಿಗಾಗಿ ಕನ್ನಡ ಕಲಿತ. ಇವರಿಗೆ ಮರಾಠಿ ಬರಬೇಕಲ್ಲ! ನನಗೆ ನಿರ್ವಾಹವಿಲ್ಲ. ಇವರ ಇಂಗ್ಲೀಷ ಪತ್ರ ಇನ್ನೊಬ್ಬರ ಮುಂದೆ ತೋರಿಸಬಾರದೆಂದು ಕನ್ನಡ ಕಲಿತೆ. ಕಲಿಸಿದ್ದೂ ಇವರೇ. ಆಗ ಎಂಥ ದರ್ಪ—ಎಂಥ ಆವೇಶ ! ಒಮ್ಮೆ ಇಷ್ಟೂ ತಿಳಿಯುವದಿಲ್ಲವೇ—ಎಂದು ಹೊಡೆದು ಬಿಟ್ಟರು. ಗಲ್ಲದಮೇಲೆ ಮೂರು ಬಟ್ಟು ಮೂಡಿದ್ದವು.

ನಮ್ಮ ಅತ್ತೆ "ಏನು ಇದು?" ಎಂದುಕೇಳಿದರು. ನಾನು ಏನು ಹೇಳಬೇಕು?

ಯಾವಾಗಲೂ ಹೀಗೇ; ತಾವು ಮಾಡಿದ್ದೇ ಸರಿ. ಇವರು ಬರೆದದ್ದು ನಾನು ಓದುವದಿಲ್ಲವಂತೆ! ತಾವು ಬರೆದದ್ದು ಯಾರುಯಾರಿಗೋ ಓದಿ ಹೇಳುತ್ತಾರೆ; ಇವರು ಓದಿದ ಮೇಲೆ ಅವರಿಗೆಲ್ಲ ಚಹಾಮಾಡಿ ಕೊಡಬೇಕು ನಾನು. ಕೇಳಿ ದಣಿದಿರುತ್ತಾರೆ ಮತ್ತೆ—! ನನಗೊಮ್ಮೆ ಓದಿ ತೋರಿಸಿದ್ದಾರೇನು? ಇವರು ಬರೆದದ್ದು ನಮಗೆ ತಿಳಿಯಬೇಕಲ್ಲ—ಕಿರ್ಲೋಸ್ಕರ ಮಾಸಿಕದಲ್ಲಿ ಎಂತೆಂಥಾ ಕಥೆ ಬರುತ್ತವೆ. ಅಂಥದನ್ನು ಬರೆಯಬೇಕು ಇವರು? ನಾನು ಓದುವದಿಲ್ಲವೇನು? ತಾವೇ ತಂದುಕೊಟ್ಟ ಮಾಸ್ತಿಯವರ ಕಥೆ ಓದಿಲ್ಲವೇನು ನಾನು? 'ಆನಂದ' ರ ಕಥೆ ಮಾತ್ರ ಒಮ್ಮೆ ಇವರೇ ಓದಿ ಹೇಳಿದ್ದರು—'ಹೆಂಡತಿಯ ಕಾಗದ'. ಆ ಬರೀ ಹಾಳೆಯ ಕಾಗದಕ್ಕೆ ಅದೆಷ್ಟು ತೊಳಲಾಡಿದ್ದನೆ ಆ ಗಂಡ! ನಾನೂ ಒಮ್ಮೆ ಇವರಿಗೆ ಹಾಗೇ ಮಾಡಿದ್ದೆ. ಅದು ಕಥೆ; ನೀನು ಹಾಗೆ ಮಾಡಬಹುದೇ—ಎಂದು ಬರೆದರು. ಕಥೆಯೇನು ನಡೆಯದೇ ಬರೆಯುತ್ತಾರೇನು? ಕಥೆ 'ಮಂಜುಘೋಷಾ' ಕಾದಂಬರಿಯೇನು? ಇವರಾವರೂ ಏನು ಬರೆಯುತ್ತಾರೆ; ನಾನು ನೋಡಿಲ್ಲವೇನು? ನನ್ನ ಕೂಡ ಜಗಳಾಡಿದ್ದು ಎಲ್ಲಾ ಬರೆದಿದ್ದಾರೆ. ಅದರಲ್ಲಿ ಮಾತ್ರ ತಪ್ಪು ತಪ್ಪು ತೋರಿಸಿದ್ದಾರೆ. ಎದುರು ಯಾಕೆ ಈ ಕೋಪ? ಬರೆಹದಲ್ಲಿಯಾದರೂ ಸಿಟ್ಟು ಮಾಡುವದಿಲ್ಲವಲ್ಲ—ಅಷ್ಟೇ ಸಾಕು. ಸಿಟ್ಟಿನ ಕಥೆ ಬರೆದರೆ ಇವರ ಪುಸ್ತಕ ಯಾರು ಕೊಳ್ಳಬೇಕು?

ನಾನೂ ಬರೆಯಬೇಕಂತೆ! ಯಾರು ಯಾರೋ ಬರೆಯುತ್ತಾರಂತೆ! ಎಲ್ಲಾ ಹೆಂಗಸರು ಬರೆದರೆ ಓದಲು ಗಂಡಸರನ್ನೆಲ್ಲಿಂದ ತರೋಣ? ಬರೆಯುವ ಹೆಂಗಸು ಇನ್ನೊಬ್ಬಳ ಕೃತಿ ಪ್ರೀತಿಯಿಂದ ಓದುತ್ತಾಳೇನು? ಈ ಗಂಡಸರು ಮಾತ್ರ ಏನು? ಇನ್ನೊಬ್ಬರು ಬರೆದದ್ದನ್ನು ಸದಾ ಟೀಕೆ ಮಾಡುತ್ತಲೇ ಇರುತ್ತಾರೆ.

ಮುಂಬಯಿಗೆ ಹೋದಾಗ ಆಟಿಗೆ ತಾ ಎಂದರೆ ಚಿಕ್ಕನಿಗೆ ಚಿತ್ರಾಕ್ಷರ ತಂದಿದ್ದಾರೆ. ನಾನದನ್ನು ಕಲಿಸಬೇಕಂತೆ. ಎರಡು ವರುಷವೂ ಇಲ್ಲ. ಏನು

ಕಲಿತೀತು ಮಗು ? ತಾವು ಕಲಿಸಬೇಕು ? ‘ನಿನಗೆ ಕಲಿಸಿದಂತೆ ಅವನಿಗೆ ಕಲಿಸಿದರೆ ಅವನ ಕೆನ್ನೆ ತಡೆಯಬೇಕಲ್ಲ—’ ಎಂದರು. ಹೌದು ತಾಯೀ. ಇವರು ಕಲಿಸುವದೂ ಬೇಡ; ಚಿಕ್ಕ ಕಲಿಯುವದೂ ಬೇಡ. ತಮಗೆ ಬಂದದ್ದೆಲ್ಲಾ ಹೆಂಗಸರಿಗೆ—ಮಕ್ಕಳಿಗೆ ಆಗಲೇ ಬರಬೇಕೆಂದರೆ? ಇವರು ತಪ್ಪದೆ-ತಿಳಿಯದೆ ಕಲಿತಿದ್ದಾರೇನು? ‘ಹೊಡೆಸಿಕೊಳ್ಳದೆ ಯಾರಿಗೆ ಅಕ್ಷರ ಬರುತ್ತವೆ’ ಎನ್ನುತ್ತಾರೆ. ಕಾಯ್ದೆ ಮಾಡಿದ್ದಾರೆ ಸರಕಾರದವರು, ಹುಡುಗರ ಮೇಲೆ ಕಲಿಸುವವರು ಕೈಎತ್ತಬಾರದೆಂದು. ಹೊಡೆದರೆ ಹುಡುಗರು ಹೇಗೆ ಶಾಲೆ ನೆಚ್ಚಬೇಕು? ಕಾಯ್ದೆ ಮಾಡಿದರೇನು? ಕಾಯ್ದೆ ಎಷ್ಟು ಪಾಲಿಸುತ್ತಾರೆ ಜನ! ನಮ್ಮ ಚಿಕ್ಕನಿಗೆ ನಾನೇ ಕಲಿಸುತ್ತೇನೆ. ಈಗೇನು ಅವಸರ—? ನಾನೇ ಕಲಿಸಬೇಕಂತೆ; ಆದರೆ ನನ್ನ ಬುದ್ಧಿ ಅವನು ಕಲಿಯಬಾರದಂತೆ ! ತಮ್ಮ ಬುದ್ಧಿಯನ್ನೇ ಇವನಿಗೆ ಬಿಟ್ಟುಕೊಡಲಿ ತಾವು ! ಅಂದರಾದರೂ ನನ್ನ ಗಲ್ಲ ಹಿಂಡಿಸಿಕೊಳ್ಳುವದು ತಪ್ಪೀತು. ನನ್ನ ಗಲ್ಲದ ಮೇಲೇ ಇವರ ಕಣ್ಣು ! ಚಿಕ್ಕನೂ ಅದನ್ನೇ ಕಲಿತು ಪರಶುರಾಮನಾದರೆ ! ಅವನೇಕಾದಾನು ? ನನ್ನ ಮಗ ಅವನು. ‘ಅವ್ವನ ಮಗನೋ ಅಪ್ಪನ ಮಗನೋ’ ಎಂದು ಅತ್ತೆ ಕೇಳಿದಾಗ ‘ಅವ್ವ’ ಎಂದು ಹೇಳಿಲ್ಲವೇ ಅವನು? ಶಶಿ ತಮ್ಮ ಮಗಳಂತೆ. ಆಗಲಿ; ನನಗೇನು ? ಮುಪ್ಪಿನಕಾಲಕ್ಕೆ ನಾನು ಮಗನ ಮನೆಯಲ್ಲಿರುತ್ತೇನೆ; ತಾವು ಮಗಳಮನೆಯಲ್ಲಿರಲಿ. ಇದ್ದಾರಿವರು ನನ್ನನ್ನು ಬಿಟ್ಟು ! ನಾನು ತವರಿಗೆ ಹೋಗಲು ಸರಕಾರೀ ರಜಾದಂತೆ ಮೂರುದಿನ ಮಂಜೂರು ಮಾಡುತ್ತಾರೆ. ನಾನೂ ‘ಹೂಂ’ ಎನ್ನುತ್ತೇನೆ, ಒಮ್ಮೆ ಕಳಿಸಲಿ-ಮುಂದೆ ನೋಡೋಣ ಎಂದು. ಈ ದೀಪಾವಳಿಗೆ ಮೂರು ದಿನ ರಜಾ ಮಂಜೂರಾಗಿತ್ತು. ಪುಣೆಗೆ ಹೋಗಿದ್ದೆ. ಹೋಗಲು ಒಂದಿನ, ಬರಲು ಒಂದಿನ,-ಇರಲು ಒಂದಿನ ಸಾಕೇ-ಎಂದು ಹೋದದಿನ ಕಾಗದ ಬರೆದೆ. ಆದವರಿಗೆ ನನ್ನ ರಜಾ ಮುಗಿದದಿನವೇ ಮುಟ್ಟಿತಂತೆ. ಮತ್ತೆ ಒಂದುವಾರ ರಜಾ ಮಂಜೂರಾಯಿತು. ಕಡಿಪಂಚಮಿ ಮಾಡಿ ಬರಬೇಕೆಂದು ಅಪ್ಪಣೆಯಾಗಿತ್ತು. ತುಳಸೀ ಮದುವೆ ಮಾಡಿ ಬರುತ್ತೇನೆಂದು ಬರೆದರೆ ಇಲ್ಲಿಯೂ ತುಳಸೀ ಮದುವೆಯಿದೆ. ನಾವೇ ನಾಂದೀ ಇಟ್ಟುಕೊಳ್ಳಬೇಕು; ಬೇಗ ಬಂದು ಬಿಡು—ಎಂದು ಬರೆದರು. ನಾನು ಬರಲಿಕ್ಕಿಲ್ಲವೆಂದು ಪತ್ರದ ಜೊತೆಗೇ ಗಾಡಿ ಹತ್ತಿ ಬಂದರು. ಇವರು ಬಂದ

ಮೂರು ತಾಸಿಗೆ ಇವರ ಕಾಗದ ಬಂತು—ಅವರ ಕೈಗೇ ಸಿಗಬೇಕೇ ಅದು ? ನಾನು ಬಾಗಿನೋಡಿದೆ. ನನ್ನ ವಿಶ್ವಾಸವಿತ್ತು. 'ಪರರ ಪತ್ರ ಓದಬಾರದು, ಒಡೆಯಬಾರದು' ಎಂದು ತಾವೇ ಹೇಳುತ್ತಾರೆ. ಈಗ ತಾವೇ ಏಕೆ ನನ್ನ ಪತ್ರ ಪಡೆಯಬೇಕು ? ಅದು ತಮ್ಮ ಪತ್ರವಂತೆ! ಬರೆದು ಅಂಚೆಯ ದಂಡಕಟ್ಟಿದ ಮೇಲೆ ಇವರ ಹಕ್ಕು ಹಾರಿತು. ಪೋಸ್ಟಿನಲ್ಲಿ ಹೋಗಿ ಕೇಳಲಿ—ಕೊಡುತ್ತಾರೇನೋ ನೋಡೋಣ. "ನಾನು 'ಪರ' ಆದೆನೇನೇ" ಎನ್ನುತ್ತಾರೆ. ಎಂಥ ಮೋಸವಿದು ! ನಾನು ಮಾತ್ರ ಇವರಿಗೆ ಬಂದ ಪತ್ರ ಓದಬಾರದು. ನಾನು ಪರ; ತಾವು ಮಾತ್ರ ಅಪರ! ಗಂಡಸಿನ ಈ ಸ್ವ-ಪರ ನ್ಯಾಯ ಬುದ್ಧಿಗೆ ಹೆಣ್ಣು ಮೋಸ ಹೋಗುವದೇನಾಶ್ಚರ್ಯ! ಮೋಸವೇನು ? ಅವರ ಹಕ್ಕಿನ ಹಕ್ಕಿಗಳು ನಾವು. ನಮ್ಮ ಹಾರಾಟ ಅವರ ಪಕ್ಕಗಳಿಂದ. ನಮ್ಮ ಶಕ್ತಿ ಅವರು; ಆಸೆ ಅವರು; ಆದರ್ಶ ಅವರು. ಆದರೆ ನಾವೇ ಅವರು. ಅವರೇ ನಾವು-ಹೌದೇ - ಅಲ್ಲವೇ ? ಅವರು ನಡೆಯಿಸಿ ಕೊಟ್ಟರೆ ಹೌದು; ಅಲ್ಲವಾದರೆ ಅಲ್ಲ.

* * * *

ನಡೆಯಿಸಿ ಕೊಡುವದೇನು? ಸ್ತ್ರೀ ಸ್ವಾತಂತ್ರ್ಯ—ಎಂದು ಗಂಡಸರೇ ಬಹಳ ಮಾತಾಡುತ್ತಾರೆ; ಅವರನ್ನು ನೋಡಿ ಹೆಂಗಸರೂ ಕೂಗಾಡುತ್ತಾರೆ. ಕೂಗಲು ಮಾತ್ರ ಈ ಹೆಂಗಸರಿಗೆ ಸ್ವಾತಂತ್ರ್ಯ ಬಂದಿದೆ. ಸಮ್ಮೇಳನಗಳಂತೆ! ಗೊತ್ತುವಳಿಗಳಂತೆ ! ಅದರಿಂದೇನಾಗುತ್ತದೆ ? ಮನೆಯಲ್ಲಿ ಮೊದಲು ಸ್ವಾತಂತ್ರ್ಯ ಸಿಗಲಿ. ಸಿಗುವದೇನು—ಅದು ನಮ್ಮ ಕೈಯಲ್ಲೇ ಇರುತ್ತದೆ. ಅದಕ್ಕೆ ಸ್ವಾತಂತ್ರ್ಯಎಂದು ಅನ್ನಬಾರದು ಮಾತ್ರ. ಆ ಶಬ್ದ ಸಭೆಗೇ ಸರಿ.

ಗಂಡಸರ ಸಭೆಯಲ್ಲಿ ಸ್ತ್ರೀಯರಿಗೆ ಪ್ರತ್ಯೇಕ ಸ್ಥಳ. ನಾಟಕ-ಸಿನೆಮಾಗಳಲ್ಲಿ ಬೇರೆ ಸ್ಥಳ. ಮೋಟರು—ಗಾಡಿಗಳಲ್ಲಿಯೂ ಬೇರೆಯೇ ಜಾಗ. ಈ ಸುಧಾರಣೆ ಗಂಡಸು ತನ್ನನ್ನು ತಿದ್ದಿಕೊಳ್ಳಲೆಂದೇ ಮಾಡಿದ್ದು. ತಮ್ಮ ಬುದ್ಧಿ ತಮ್ಮ ಸ್ವಾಧೀನ ಇರುವದಿಲ್ಲ; ಇನ್ನೊಬ್ಬರ ಮೇಲೆ ಸದಾ ಸಂಶಯದ ಆರೋಪ. ಈಗ ಹೆಂಗಸರ ಸಭೆಗಳಾಗುತ್ತವೆ. ಅದರಲ್ಲಿ ಗಂಡಸರಿಗೆ ಪ್ರವೇಶವೇ ಇಲ್ಲ. ಎಲ್ಲಾ ಝುನಾನಾ ಶೋ! ಆದರೆ ಭಾಷಣಕ್ಕೆ ಒಂದು ಗಂಡನ್ನು ಯಾವಾಗಾದರೂ ತರುತ್ತಾರೆ. ಅವರ ಮುಖಕ್ಕೇ 'ಗಂಡಿನ ಸ್ವೈರಾಚಾರ-ಸ್ವಾರ್ಥ' ಎಂದು ಬೈಯುತ್ತಾರೆ ನಮ್ಮ ಹೆಂಗಸರು. ಇದೆಂಥ ನ್ಯಾಯವೆ ?

ಅವರನ್ನು ಕರೆಯಬೇಕೇಕೆ; ಅನ್ನಬೇಕೇಕೆ ? ಬಂದವರೂ ಸುಮ್ಮನೆ ಅನ್ನಿಸಿ ಕೊಂಡು ಹೋಗುತ್ತಾರೆ. ಇನ್ನೇನು ಮಾಡಿಯಾರು ? ತಾವೇ ಕಲಿಸಿಕೊಟ್ಟ ಸ್ತ್ರೀ ಸ್ವಾತಂತ್ರ್ಯ !

ಹೀಗೆ ಸ್ತ್ರೀಯರ ಸಭೆ ಬೇರೆಯಾಗಿ ಮಾಡಲೇ ಕೂಡದು. ಸ್ತ್ರೀಯರ ಸಮಸ್ಯೆಗಳು ಪ್ರತ್ಯೇಕವಾಗಿವೆಯಂತೆ ! ಅವನ್ನೂ ಗಂಡಸರೇ ಹೇಳಿದ್ರು. ಗಂಡಸರ ಸಮಸ್ಯೆಗಳು ಎಷ್ಟಿಲ್ಲ? ಅವನ್ನು ನಾವು ಹೇಳಬೇಕೆ? ಈ ಪ್ರತ್ಯೇಕ ಪಾಕಿಸ್ತಾನೀ ಭಾವನೆ ತೊಲಗಬೇಕು. ಗಂಡು-ಹೆಣ್ಣು ಕೂಡಿ ಸಂಸಾರ ಮಾಡುತ್ತಾರೆ. ಸಭೆ-ಸಮ್ಮೇಳನ ಬೇರೆ ಯಾಕೆ ? ನಮಗೆ ತಿಳಿಯುವ ಈ ಸಮಸ್ಯೆ ಅವರಿಗೆ ಹೇಗೆ ತಿಳಿದೀತು ? ಸಮ್ಮೇಳನದಿಂದಲಾದರೂ ಏನು ತಿಳಿಯುತ್ತದೆ ತಾಯೀ. ಉದಯವಾಗಲಿ, ವಂದೇಮಾತರಂ ಹಾಡುವದಕ್ಕೆ ಮಾತ್ರ ಹುಡುಗಿಯರು ಬೇಕು. ಎಲ್ಲಾ ಕಾರಭಾರ ಅವರದೇ—ಗಂಡಸರದು. ತಾವು ಮಾತ್ರ ಉದಯವಾಗಿದ್ದಾರೇನೋ ! ವಂದೇ ಮಾತರಂ—ಅವರೂ ಅವರು ಹೇಳಲಿ. ನಾವು ಹೆಂಗಸರು-ತಾಯಂದಿರು.

ಮೂರು ದಿನದಿಂದ ಇವರು ನನ್ನೊಡನೆ ಮಾತೇ ಆಡಿಲ್ಲ. ಅಣ್ಣ ನಾಳೆ ಕರೆಯಲು ಬರುತ್ತಾನೆ. ಅವನು ಶಶಿಯನ್ನು ನೋಡೇ ಇಲ್ಲ. ತನ್ನ ಮಗ ದಿನಕರನ ಕೂಡ ಶಶಿಯನ್ನು ಕೂಡಿಸಿ ಫ್ರೋಟೋ ತೆಗೆಸುತ್ತಾನಂತೆ ! ಶಶಿಗೆ ಕೂಡಲೂ ಬರುವದಿಲ್ಲ ಇನ್ನೂ. ಚಿಕ್ಕ, ದಿನಕರನಿಗಿಂತ ದೊಡ್ಡವ. ಅವನದೊಂದು ಫೋಟೋ ತೆಗೆಸಿರಿ ಎಂದು ಇವರಿಗೆ ಹೇಳಿ ಸಾಕಾಯಿತು. ನಿಮ್ಮ ಅಣ್ಣನಿಗೆ ಮಗಳು ಹುಟ್ಟಲಿ-ಕೂಡಿಸಿ ತೆಗೆಸೋಣ ಎನ್ನುತ್ತಾರೆ. ಈಗಿಂದಲೇ ಈ ಕೂಡಿಸುವ ಆಸೆ ಗಂಡಸರಿಗೆ. ಮತ್ತೆ ನಮಗೆ ಅನ್ನುತ್ತಾರೆ !

ಯಾವಾಗಲೂ ಇವರು ಹೀಗೇ. ನಾನು ತವರುಮನೆಗೆ ಹೋಗುವಾಗ ಇವರು ಮಕ್ಕಳಂತೆ ಮಾತು ಬಿಡುತ್ತಾರೆ ! ಹೋದಮೇಲೆ ಉದ್ದುದ್ದ ಪತ್ರ. ನಮಗೂ ಬೇಸರ ಬಂದಿರುತ್ತದೆ. ತವರಿಗೆ ಹೋಗಬಾರದೇನು ? ' ನನ್ನ ಬೇಸರವೇ ! ' ಅನ್ನುತ್ತಾರೆ. ನಾನು ಹಾಗೆ ಎಂದು ಅಂದಿದ್ದೇನೆ? ತಾವೂ ಬರಬೇಕು. ಅಣ್ಣ-ಅವ್ವ ಎಷ್ಟು ಸಲ ಕೂಡಿಯೇ ಬರಲು ಹೇಳಿಲ್ಲ!

ಕೆಲಸವಂತೆ ! ಅದು ಇದ್ದೇ ಇರುತ್ತದೆ. ನಿನ್ನೆ ಬಂದವರು—ಜಗಳಾಡಿ ತಿರುಗಿ ಬಂದರು.

ಅವರೇ ಮಾತಾಡಿಸಲಿ ಎಂದು ನಾನೂ ಎರಡುದಿನ ಕಾಯ್ದು. ಗಂಡಸು ಬಹಳ ಕಠಿಣ. ನಿನ್ನೆ ನನಗೇ ತಡೆಯದೆ ಮಾತಾಡಿಸಿದೆ. ಅದೆಂಥ ಮಾತಾಡಬೇಕು ಇವರು ! ನಾನು ಅಲ್ಲೇ ಇರಬೇಕಂತೆ. 'ನನಗೆ ತಿಳಿದಾಗ ಬಾ' ಎನ್ನುತ್ತಾರೆ ನನಗೆ ತಿಳಿಯುವದಿಲ್ಲವೆ ? ನಾಲ್ಕು ದಿನ ಇದ್ದು ಬರುತ್ತೇನೆ. ದಿನಕರನ ಜಾವಳ. ಒಂದು ಸೀರೆ ಬರುತ್ತದೆ. ತಮ್ಮ ತಂಗಿಯನ್ನು ಇವರು ಕರೆಸುವದಿಲ್ಲವೇನು ?

ಇವರು ಏನೋ ಬರೆದದ್ದಕ್ಕೆ ಇಪ್ಪತ್ತು ರೂಪಾಯಿ ಬಂದಿದೆಯಂತೆ. ಅದನ್ನು ಕೊಡಿ. ಶಶಿಗೆ ಜೈಸು ತರುತ್ತೇನೆ ಎಂದೆ. ನನ್ನ 'ಜೈಸೀ'ಗೆ ಎನ್ನುತ್ತಾರೆ. ನಾನೇನು ಜೈಸೀ ಮಾಡಿದ್ದು ? ಇವರೆಷ್ಟು ದುಡ್ಡು ಕೊಟ್ಟಿದ್ದಾರೆ ! ಮತ್ತೆ ನನ್ನ ಟ್ರಂಕಿನಲ್ಲಿಯ ಪುಡಿಕಾಸೂ ನಿಲ್ಲುವಂತಿಲ್ಲ.

ಈ ಸಲ ಇವರೇ ಬಂದು ನಾಲ್ಕುದಿನ ಇದ್ದು ನನ್ನನ್ನು ಕರೆದುಕೊಂಡು ಬರಲಿ. ನಾನೂ ಮಾತು ಬಿಡುತ್ತೇನೆ—ಅಲ್ಲಿ ಬಂದಾಗ. ಛೇ. ನನಗೆ ಒಂದಿನ ಮಾತು ಬಿಡುವದಾಗುವದಿಲ್ಲ. ಹೆಂಗಸರು ಹೇಗೆ ಮಾತು ಬಿಡುವರು ? ಇವರ ಸೇವೆ ಸಲ್ಲಬೇಕು. ಮಾತು ಹೇಗೆ ಬಿಡುವದು ? ನಾವೇನು ಅಷ್ಟು ಕಠಿಣರಲ್ಲ.

ಚಿಕ್ಕನನ್ನು ಕಳಿಸುವದಿಲ್ಲನಂತೆ! ಅತ್ತೆಯ ಹತ್ತಿರ ಅವನು ಇದ್ದಾನು. ನನಗೆ ಹೇಗೆ ಸರಿ ಹೋಗಬೇಕು. ಅವನನ್ನು ಬಿಟ್ಟು ನಾನಿರಬೇಕಂತೆ ? ನನಗಾಗುವದಿಲ್ಲ ತಾಯೀ.

* * * *

ಅಣ್ಣ ಬಂದಿದ್ದಾನೆ. ಇವರನ್ನೂ ಬರಲು ಒತ್ತಾಯ ಮಾಡೆಂದು ಹೇಳಿದ್ದೇನೆ. ಬರಬೇಕಲ್ಲ ಇವರು ! ಬರದಿದ್ದರೆ ನಾಲ್ಕುದಿನದಲ್ಲಿ ನಾನೇ ಮರಳಿ ಬರಬೇಕು. ಶಶಿ ಹುಟ್ಟಿದಮೇಲೆ ನಾನು ಹೋಗೇ ಇಲ್ಲ. ಅವ್ವ ಹದಿನೈದು ದಿನವಾದರೂ ನಿಲ್ಲಿಸಿಕೊಂಡಾಳು. ನಾನು ಇಲ್ಲಿ ಇಲ್ಲವಾದರೆ ಹೊತ್ತಿಗೆ ಮನೆಗೇ ಬರುವದಿಲ್ಲವಂತೆ ! ಊಟ— ಉಪಹಾರ—ನಿದ್ರೆ ಎಲ್ಲ ಅನಿಯಮಿತ ಮಾಡಿಬಿಡುತ್ತಾರೆ. ಹಿಂದೆ ಚಿಕ್ಕನ ಹೆರಿಗೆ ನಾನು

ಹೋದವಳು ಮೂರು ತಿಂಗಳು ಬರಲಿಲ್ಲ. ಬಾಣಂತನವೆಂದರೆ ಮೂರು ತಿಂಗಳು ಸಾಕೇ—ಎಂದರು ತಾಯಿ. ನಡುವೆ ಒಮ್ಮೆ ಇವರು ಬಂದಾಗ ಬಡವಾಗಿ ಹೋಗಿದ್ದರು. ಮಗುವಿನ ನಾಮಕರಣಕ್ಕೆ ಅತ್ತೆ ಬಂದಾಗ ಹೇಳಿದ್ದರು : ನಿನ್ನ ಗಂಡನಿಗಷ್ಟು ಹೇಳವ್ವಾ, ಹೊತ್ತು ಹೊತ್ತಿಗೆ ಊಟ-ನಿದ್ದೆ ಮಾಡಲಿ—ಎಂದು. ಆಗಿನ್ನೂ ಹೊಸದು. ನಾನು ಹೇಗೆ ಹೇಳಲಿ ? ಶಶಿಯ ಹೆರಿಗೆಗೆ ತಾಯಿ ಕರೆದರೂ ಇವರ 'ಆಟ' ತಿಳಿದು ನಾನು ಹೋಗಲಿಲ್ಲ. ಚಿಕ್ಕನನ್ನು ಕರೆದುಕೊಂಡು ಹೋಗಲು ಅತ್ತೆ ಹೇಳಿದ್ದಾರೆ. 'ತಾಯಿ-ಮಕ್ಕಳನ್ನು ನಾನೇಕೆ ಅಗಲಿಸಲವ್ವಾ' ಎಂದರು.

ಒಮ್ಮೆ ಇವರು ತಾಯಿಯ ಕೂಡ ವೃಥಾ ಜಗಳಮಾಡಿ ಬೇರೆ ಇರುತ್ತೇನೆಂದರು. 'ಹೆಂಡತಿ ಕಿವಿ ಚುಚ್ಚಿದ್ದಾಳೆ' ಎಂದರು ಅತ್ತೆ. ನಾನೇಕೆ ಹಾಗೆ ಹೇಳಲಿ? ಇವರ ಕಾಲು ಹಿಡಿದು ಹೇಳಿದೆ : ಬೇಡ; ಮುಪ್ಪಿನ ತಾಯಿ, ಚಿಕ್ಕವರು ತಮ್ಮಂದಿರು—ಎಂದು. 'ಬಹಳ ದೊಡ್ಡವಳಾದೆ ನೀನು' ಎಂದರು. 'ಅಪವಾದ ಯಾರಿಗೆ ?' ಎಂದೆ. ಮರುದಿನವೇ ಕರಗಿತ್ತು ಸಿಟ್ಟು, ಮುಂಜಿ ನಂತೆ. ಹೆತ್ತ ಕರುಳಲ್ಲವೆ ?

ಅವರು ಬರುವದಿಲ್ಲವಂತೆ. ಬಹಳ ಹಟವಾದಿ ಇವರು. ಬೇಗ ಬಂದು ಬಿಡುತ್ತೇನೆ. ನನಗಾದರೂ ಎಲ್ಲಿ ಬಿಟ್ಟಿರಲು ಆಗುತ್ತದೆ. ಅವ್ವ-ಅಣ್ಣ ಹಾಗೇ ನಗೆಯಾಡುತ್ತಾರೆ. ಅವರಿಗೆ ನಗೆ ! ನನಗೆ?

ನಾನು ಹೋಗುವಾಗ ಇವರ ಪ್ರೀತಿ ಎದೆಯಲ್ಲಿ ತುಂಬಿಕೊಳ್ಳುತ್ತೇನೆ. ರೂಪ ಕಣ್ಣಲ್ಲಿ ಕಟ್ಟಿದೆ. ಗಡುಸಾದರೂ ಧ್ವನಿ ನನ್ನ ಕಿವಿಗೆ ಇಂಪೇ. ಹೇಗವ್ವಾ ಬಿಟ್ಟು ಹೋಗಿ ಬರಲಿ ? ಬೇಗ ಬಂದು ಬಿಡಬೇಕು. ಬೆಟ್ಟದ ವೆಂಕಟೇಶಾ ನಾ ಬರುವವರೆಗೆ ಇವರಿಗೆ ನಿನ್ನ ರಕ್ಷೆ ! ಜಗದಂಬೇ ನಿನ್ನ ರಕ್ಷೆ !!

# ಪರಿ-ಪಾಠ

ನಾನು ಕಲಿತದ್ದೂ ಅಷ್ಟರಲ್ಲಿಯೇ ಇದೆ. ಆದರೆ ಮಕ್ಕಳಿಗೆ ಓದು ಹೇಳುವಷ್ಟು ನನಗೆ ಬರಲಾರದೇ? ಕಲಿತ ರೂಢಿಯೇ ಇಲ್ಲವೆಂದರೆ ಕಲಿಸುವ ಕಲೆ ಗೊತ್ತಿರಬಾರದೇನು ? ನಾನು ಶಾಲೆ ಓದುತ್ತಿದ್ದಾಗ ನನಗಿಂತ ಕಡಿಮೆ ಜಾಣನಾದ ಒಬ್ಬ ಗೆಳೆಯನನ್ನು ಕಟ್ಟಿಕೊಂಡು ಅವನ ಮುಂದೆ-ಅವನಿ ಗಾಗಿ ಓದಿ ನಾನು ಪ್ರಯೋಜನ ಪಡೆಯುತ್ತಿದ್ದೆ ಆ ಗೆಳೆಯ ನನಗಿಂತ ಹೆಚ್ಚಿನ ಪ್ರಯೋಜನ ಪಡೆಯುತ್ತಿದ್ದಿಲ್ಲವೆಂದೇ ನನ್ನ ಓದು ಸಾಗುತ್ತಿತ್ತು.

ನನ್ನ ಎಳೆತನದಲ್ಲಿ ನನ್ನ ತಮ್ಮನಿಗೆ ಓದು ಹೇಳುವ ಸಂದರ್ಭವೊಮ್ಮೆ ಬಂತು. ಬಂತೇನು—ನಾನೇ ತಂದುಕೊಂಡೆ. ನಾನು ಹೇಳಿದ್ದು ಆ ಕ್ಷಣ ಅವನಿಗೆ ತಿಳಿಯಬೇಕು—ಅಂದರೆ. ನನ್ನ ಪಾಠ ಹೇಳುವ ಕಲೆಗಿಂತ ಅವನಲ್ಲಿ 'ಗ್ರಾಹಕ'ತನ ಹೆಚ್ಚಿಗಿರಬೇಕು. ಆದರೆ ನಾಲ್ಕು ದಿನದಲ್ಲಿಯೇ ಅವನನ್ನು ನನ್ನನ್ನಾಗಿ ಮಾಡಬಹುದೆಂದು ನನ್ನ ಆಸೆ. ಆದರೆ ಅವನು ನನ್ನ ತಮ್ಮ ನೆನ್ನುವುದಕ್ಕಿಂತ ನನ್ನ ಗೆಳೆಯ—ನನಗಿಂತ ಕಡಿಮೆ ಜಾಣನಾಗಿರುವವ– ನ ತಮ್ಮನಂತಿದ್ದ. ಆದ್ದರಿಂದ ನನ್ನ ಜಾಣತನ ವೆಚ್ಚವಾಗುತ್ತಿದ್ದಿಲ್ಲ.

ಒಂದು ದಿನ ಒಂದು ಪಾಠ ಒಮ್ಮೆ ಹೇಳಿದೆ; ನನ್ನ ತಮ್ಮನಿಗೆ. ಅವನು ಗ್ರಹಿಸಲಿಲ್ಲ. ಅವನಿಗೆ ಆಟದ ಮೇಲೆ ಲಕ್ಷ್ಯ. ನನಗೆ ಯಾವ ಆಟದಲ್ಲಿಯೂ ಆಸ್ಥೆಯಿಲ್ಲ. ದುಡಿಮೆಯೆ ನನಗೆ ಅಪ್ರೀತಿಯ ವಿಷಯ. ಆಟಕ್ಕೂ ಒಂದಿಷ್ಟು ದುಡಿಮೆ ಬೇಕಷ್ಟೆ.

ಆಟದ ಮಾತು ಬಂತು,—ಒಂದು ಅಡ್ಡ ನೆನಪು ಹೇಳುತ್ತೇನೆ. ಬಗರಿ ಆಡುತ್ತಾರಲ್ಲ, ಮಕ್ಕಳು—ನಾನೂ ಒಮ್ಮೆ ಬಗರಿ ಆಡಹೋಗಿದ್ದೆ. ಸೋತವನ ಬಗರಿಗೆ ಗೆದ್ದವರು ತಮ್ಮ ಬಗರಿಯಿಂದ ಕುಕ್ಕಿ ಆಡುತ್ತಾರೆ. ನನ್ನ ಬಗರಿಗೆ ತುಂಬ ಛಿದ್ರವಾಯಿತು. ಇಂದ್ರನ ಮೈಯ ಕಣ್ಣುಗಳಂತೆ, ಸಿಡಬು ಹತ್ತಿದ ಮುಖಕಮಲದಂತೆ ನನ್ನ ಬಗರಿಯು ಪಾಡಾದರೆ ನನಗೆ

ಒಂದಿಷ್ಟಾದರೂ ಹೇವ ಬರಬೇಕಲ್ಲ! ಆಟ ಬಾರದರೆ ತಾನೇ ಹೇವ—ಹೀಗಾಗಿ ಆಟದಲ್ಲಿ ನನಗೆ ಶ್ರದ್ಧೆ ಕಡಿಮೆಯಾಯಿತು. ಹಾ—ನನ್ನ ತಮ್ಮನಿಗೆ ಪಾಠ ಹೇಳಿದೆ. ಅವನಿಗೆ ಹತ್ತಲೇ ಇಲ್ಲ. ತೀರ ಸಾಮಾನ್ಯವಾದೊಂದು ಮಾತನ್ನು ಅವನು ಗ್ರಹಿಸದೇ ಹೋದನಲ್ಲ—ಎಂದು ನನ್ನ ತಾಳ್ಮೆ ತಪ್ಪಿತು ನಾನು ಕಲಿತ ನಾಲ್ಕು ವರುಷದಲ್ಲಿ ನನಗೆ ದೊರೆತ ಮಾಸ್ತರರ ಛಡಿ ಪ್ರಸಾದವನ್ನೆಲ್ಲಾ ನನ್ನ ತಮ್ಮನಿಗೆ ಆದೊಂದೇ ದಿನ ಒಪ್ಪಿಸಿಬಿಟ್ಟೆ. ಪಾಠ ಅಲ್ಲೇ ಉಳಿಯಿತು. ನಮ್ಮ ತಾಯಿ ಬಂದು ನನ್ನ ಈ ಕಲಿಸುವ ಪ್ರಕರಣ ನೋಡಿ 'ಛೀ' ಹಾಕಿದರು. ನನ್ನ ಅಣ್ಣನೊಬ್ಬ ಬಂದು ನಾನು ಪ್ರಸ್ಥಾಪಿಸಿದ ಹಿರಿತನವನ್ನು ಅಳಿಸಿ ತನ್ನ ಹಿರಿತನವನ್ನು ನನ್ನ ಮೇಲೆಯೇ ಹೇರಲೆತ್ನಿಸಿದ. ನನ್ನ ಅಹಂಕಾರ ಕೆಣಕಿದಂತಾಯಿತು. ಆಟದಲ್ಲಿ ಇಲ್ಲದ ಹೇವ ಇಲ್ಲಿ ಅವತರಿಸಿತು. ನನ್ನ ಬುದ್ಧಿಯಂತೆ ನನ್ನ ತಮ್ಮನ ಬುದ್ಧಿ ಓಡಲಿಲ್ಲವೆಂದು ನನ್ನ ವಾದ. ನಿನಗೆ ಬುದ್ಧಿಯೇ ಇಲ್ಲವೆಂದು ನನ್ನ ಅಣ್ಣನ ವಾದ. ವಾದ ಪ್ರಕೋಪಕ್ಕೆ ಹೋಗಿ ನನ್ನ ಬಗರಿಗೆ ಆದ ತಗ್ಗುಗಳ ಪರಿಣಾಮ ತಿರುಗಿ ನನ್ನ ಮೈಮೇಲೆ ದಿನ್ನೆಗಳಾದವು. ನನ್ನ ತಮ್ಮನಿಗೆ ಸಮಾಧಾನವಾಗುವಷ್ಟು ನನ್ನನ್ನು ನನ್ನ ಅಣ್ಣ ಹಿಗ್ಗಿಸಿದ.

ನಮ್ಮ ತಾಯಿ ತನ್ನ ಇಬ್ಬರು ಮಕ್ಕಳಿಗೂ ಆರೈಕೆ ಮಾಡಬೇಕಾಯಿತು. ಹೊಡಸಿಕೊಳ್ಳದ ನನ್ನ ಅಣ್ಣನೊಬ್ಬನೇ ಅಪರಾಧಿಯಾದ. ನನ್ನ ಅಪರಾಧ ಮರೆಯಾಯ್ತು.

ಆಮೇಲೆ ನನ್ನ ಕಲಿಯುವ ದಿನ ಬಹುಬೇಗ ಮುಗಿದವು. ಮುಂದೆ ಕಲಿಸುವುದೇ ನನ್ನ ವೃತ್ತಿಯಾಗಬೇಕೆಂದು ನಾನು ನನ್ನ ಅಭ್ಯಾಸ ನಿಲ್ಲಿಸಿ ಹುಡುಗರಿಗೆ ಪಾಠ ಹೇಳತೊಡಗಿದೆ. ನೆರೆಯ ಒಬ್ಬ ಹುಡುಗನ ಮೇಲೆ ನನ್ನ ಪಾಠಕ್ರಮ ಜಾರಿಯಾದಾಗ ಅವರ ಮನೆಯವರು ನನಗೆ ನನ್ನ ಮನೆಯದಾರಿ ತೋರಿಸಿದರು. ಜಗತ್ತಿಗೆ ನನ್ನ ಜ್ಞಾನದಾನದ ಅವಶ್ಯಕತೆಯಿಲ್ಲವೆಂದು ಬಗೆದು ನಾನು ವೃತ್ತಿ ಬದಲಿಸಬೇಕಾಯಿತು.

* * * *

ನಾನೀಗ ಯಾವದೇ ಒಂದು ವೃತ್ತಿಯಲ್ಲಿರಲಿ, ಒಂದು ತುತ್ತು ಅನ್ನ ಹುಟ್ಟುವಂತಾಗಿದೆ. ಮದುವೆಯಾಗಿದೆ. ಇಬ್ಬರು ಮಕ್ಕಳಿದ್ದಾರೆ.

ಹಿರಿಯ ಹುಡುಗ ಮೋಹನನನ್ನು ಮೊನ್ನೆ ಶಾಲೆಗೆ ಹಾಕಿದೆವು. ನನಗೆ ಹಿಂದಿನ ನನ್ನ ಪಾಠಕ್ರಮದ ನೆನಪು ಮರೆತಿತ್ತು. ನನ್ನ ಮಗ ಆರು ತಿಂಗಳು ಶಾಲೆಗೆ ಹೋಗಿ ಐದು ಅಕ್ಷರ ಕೂಡ ಕಲಿತಿಲ್ಲವೆಂಬುದು ನನಗೆ ಮೊನ್ನೆ ತಿಳಿಯಿತು. ಯಾರದೊ ಮಾತು ಕೇಳಿ ಮೋಹನನನ್ನು ಆಟದ ಶಾಲೆಗೆ ಹಾಕಿದ್ದೆ. ಅಲ್ಲಿ ಅಕ್ಷರ ಜ್ಞಾನವೇಕೆ ಬೇಕು? ಆದರೂ ಅವನ ಓರಗೆಯ ಹುಡುಗರು ಆಟವನ್ನೂ ಅಕ್ಷರವನ್ನೂ ಕಲಿತು ಮುನ್ನಡೆಯುತ್ತಿದ್ದಾರೆ. ಮೋಹನ ಮಾತ್ರ ಆಟದಲ್ಲಿ ನನ್ನಂತೆಯೇ ಮುಂದು. ಹುಡುಗಾಟದಲ್ಲಿ ನನ್ನದೇ ಹಿರಿತನ ಅವನಿಗೆ. ಅಕ್ಷರ ಮಾತ್ರ ಅವನ ಬಳಿಗೆ ಇನ್ನೂ ಸುಳಿದಿಲ್ಲ.

ಮೊನ್ನೆ ಅವನಿಗೆ ಹದಿನಾರನೇ ಪಾಟಿ ತಂದು ಕೊಡಬೇಕಾಯಿತು. ಪಾಟಿಗೊಂದರಂತಾದರೂ ಅಕ್ಷರ ಕಲಿತಿದ್ದರೆ ಆಗುತ್ತಿತ್ತು ಎಂದು ನನ್ನ ಮಡದಿ ನುಡಿದಳು. 'ನಾನು ಅವಳಿಗೆ ನೀನು ಯಾಕೆ ಹುಡುಗನಿಗೆ ಪಾಠ ಹೇಳಬಾರದು' ಎಂದೆ 'ಅದು ನಿಮ್ಮ ಕೆಲಸ' ಎಂದಳವಳು

ಅಂತೂ ಮತ್ತೆ ನನ್ನ ಪಾಠಕ್ರಮ ಆರಂಭವಾಯಿತು. ಮೊದಲನೆಯ ದಿನವಂತೂ ಯಾವ ತೊಂದರೆಯೂ ಇಲ್ಲದೆ ನಾಲ್ಕು ಅಕ್ಷರಗಳನ್ನು ಕಲಿಸಿದೆ. ಮಗನೆಂಬ ಕರುಳು ಬೇರೆ. ನಾಲ್ಕು ಅಕ್ಷರ ನನ್ನ ಮಗನಿಗೆ ಬಂದವೆಂಬ ಸಂತೋಷ ಬೇರೆ. ನನ್ನ ಮಡದಿಗೆ ಹೇಳಿ ನನ್ನ ಕಲಿಸುವ ಕಲೆಯ ಬಗ್ಗೆ ಜಂಬ ಕೊಚ್ಚಿಕೊಂಡೆ. ಬಹುಮಾನ ಸಿಕ್ಕುವಂತಿಲ್ಲ. ಯಾಕೆಂದರೆ 'ಅದು ನನ್ನ ಕೆಲಸ'ವೆಂದು ಆಕೆ ಆಜ್ಞಾಪಿಸಿದ್ದಳು. ಮೋಹನನೂ ನಾಲ್ಕು ಅಕ್ಷರ ಕಲಿತ ವರದಿ ತಾಯಿಗೆ ಒಪ್ಪಿಸಿದ. ಅವನಿಗೆ ಮಾತ್ರ ಬಹುಮಾನ ದೊರೆಯಿತು. ಕಲಿಸುವದು ನನ್ನ ಕೆಲಸವೆಂದು ಅದನ್ನು ಮಾಡಿದ ನನಗೆ ಬಹುಮಾನವಿಲ್ಲ. ಕಲಿಯುವುದು ಮೋಹನನ ಕೆಲಸವಷ್ಟೆ. ಅವನು ನನ್ನ ಕಲಿಸುವ ಕಲೆಯ ಪರಿಣಾಮದಿಂದ ಕಲಿತ. ಅವನಿಗೇಕೆ ಬಹುಮಾನ—ಎಂದೆ. 'ನಿಮ್ಮದೇನು—ಇವನು ಗಾಂಧೀ ಹೆಸರು ಇಟ್ಟು ಕೊಂಡಿದ್ದಾನೆ. ನಾಳೆ ನೀವು ಹೇಳದೇ ಎಂಟು ಅಕ್ಷರ ಕಲಿಯುತ್ತಾನೆ'—ಎಂದು ಹೇಳಿ ಮತ್ತೊಂದು ಮುತ್ತು ಕೊಟ್ಟಳು.

ನನ್ನ ಚಿಕ್ಕಮಗ ಅಶೋಕಗೆ ಮಾತು ಬರುತ್ತವಾದರೂ ನನ್ನ ಮಾತು ತಿಳಿಯುವದಿಲ್ಲ. ಮೋಹನನಿಗೆ ಮುತ್ತು ದೊರೆತದ್ದು ನೋಡಿ

'ನಂಗ' ಎಂದು ಮುಂದೆ ಬಂದ. ಅವನಿಗೆ ನಾನು ಸಲಿಸಿದೆ. 'ಪಾಟಿ—ನಂಗ' ಅಂದ. ಆಗ ವರದಿಯಾಯಿತು ಹದಿನೈದರಲ್ಲಿ ಸಮಪಾಲಿನಿಂದ ಪಾಟಿ ಒಡೆದಿದ್ದಾರಂತೆ ಈ ಮಕ್ಕಳು. ಹದಿನೈದರಲ್ಲಿ ಅದೆಂಥ ಸರಿಪಾಲು ಎಂದೆ. ಮೋಹನನೂ ಹೇಳಿದ: ಅವ್ವನೂ ಐದು ಪಾಟಿ ಒಡೆದಿದ್ದಾಳೆ—ಎಂದು. ಸರಿಯಾಯಿತು, ಐದು ಮೂರಲೆ ಹದಿನೈದು ಎಂದೆ. ಮೋಹನ ಐದು ನಾಲ್ಕಲೆ ಇಪ್ಪತ್ತು ಎಂದ. ನನಗೆ ಆಶ್ಚರ್ಯ—ಅವನಿಗೆ ಅಕ್ಷರ ಬರುವದಿಲ್ಲ. ಆದರೆ ಅಂಕಿ—ಮಗ್ಗಿಗಳು ಬರುತ್ತವೆ ದಿನಾಲು ನಾನು ತರುವ ದಿನ ಪತ್ರಿಕೆಯ ದಿನಾಂಕ ಹೇಳುವವನು ಅವನೇ ಇಂಗ್ಲೀಷಿನ ಅಂಕಿಗಳೂ ತಿಳಿಯುತ್ತವೆ. ಐದು ನಾಲ್ಕಲೆ ಇಪ್ಪತ್ತು—ಎಂದರೆ ಇನ್ನು ಅವನು ಐದು ಪಾಟಿ ಮುಗಿಸಬೇಕೇನೋ !

ನನ್ನ ಪಾಠಕ್ರಮಕ್ಕೆ ತುಂಬ ಒಳ್ಳೆಯ ವಾತಾವರಣ ಉಂಟಾಯ್ತು. ಮರುದಿನ ಮತ್ತೆ ಎಂಟು ಅಕ್ಷರ ಹೇಳಿದೆ. ನಡುವೆ ಎರಡು ಗಾಡಿಗಳನ್ನು ನೋಡಿ ಬಂದು ಮೋಹನ ಕಲಿತ. ನಮ್ಮ ಮನೆ ಸ್ಟೇಶನ್ನಿನ ಹತ್ತಿರವೇ ಇದೆ. ಗಾಡಿ ಬಂದಾಗ ನಾವು ಸ್ಟೇಶನ್ನಿನ ಮೇಲಿರುವುದು ಪರಿ-ಪಾಠ. ಮಕ್ಕಳಿಗೆ ನಾನೇ ಕಲಿಸಿದ ಮೊದಲ ಪಾಠವದು. ಈಗ ಅಕ್ಷರಾಭ್ಯಾಸದ ನಡುವೆ ಈ ಗಾಡಿಗಳು ಬಂದು ತೊಂದರೆ ಕೊಡುತ್ತವೆನಿಸಿತು. ಗಾಡಿ ಕೂಗಿಕೊಂಡಿತೆಂದರೆ 'ಅಣ್ಣ-ಗಾಡಿ' ಎಂದು ಅಶೋಕ ಒಡನುಡಿಯುತ್ತಾನೆ. ಅಣ್ಣ ಓಡಿಹೋಗುತ್ತಾನೆ. ಅಶೋಕ ತನಗೆ ಬಂದಂತೆ ಮಾತಾಡುತ್ತ, ತನಗೆ ಬಂದಂತೆ ನಡೆಯುತ್ತ ಹೊರಡುತ್ತಾನೆ. ಆಗ ಅವರ ತಾಯಿ ಓಡಿ ಬಂದು ಎತ್ತಿಕೊಂಡು ಹೋಗುತ್ತಾಳೆ. ಇಂದಿಗೂ ಹಾಗೇ. ಗಾಡಿ ಬಂದರೆ ಮೂವರೂ ಓಡುವವರೇ. ನಾನು ಮನೆಗೆ ಬಂದಾಗ ಇವರನ್ನು ಕಾಣದೆ ಎಷ್ಟೋ ಸಲ ಸ್ಟೇಶನ್ನಿನಲ್ಲಿಯೇ ಎದುರುಗೊಂಡಿದ್ದೇನೆ.

ಮೂರನೆಯ ದಿನ ರಜವನ್ನೇ ತೆಗೆದುಕೊಂಡೆ. ಅಂದು ಮೋಹನನಿಗೆ ಮೂಲಾಕ್ಷರಗಳನ್ನೆಲ್ಲ ಕಲಿಸಿಬಿಡಬೇಕೆಂದು ಸಂಕಲ್ಪ ಮಾಡಿದೆ. ನನ್ನಾಕೆಗೂ ನನ್ನ ಸಂಕಲ್ಪ ಹೇಳಿದೆ. ನಿಮಗೆ—ಇಲ್ಲವೆ ಮೋನಿಗೆ ಪಾಠದ ಅಜೀರ್ಣವಾಗುತ್ತದೆ, ಎಂದು ಶಕುನ ನುಡಿದಳು. ನನಗೆ ಅವಳ ಮಾತು ರುಚಿಸಲಿಲ್ಲ. ಪಾಠಕ್ಕೆ ಕೂಡಬೇಕು, ಗಾಡಿ ಕೂಗಿತು. 'ಅಣ್ಣ ಸಾಡಿ' ಎಂದು ಅಶೋಕ

ಕೂಗಿಕೊಂಡ. ಮೋಹನ ಓಡಿದ. ಎಡಪ್ರತ್ತ ಹೊರಟ ಮಗನನ್ನು ಕಂಕುಳ್ಗೇರಿಸಿ ಈ ತಾಯಿಯೂ ಓಡಿದಳು. ನಾನು 'ಸಂಕಲ್ಪಧ್ಯಾನ' ಮಾಡುತ್ತ ಒಬ್ಬನೇ ಕುಳಿತೆ.

ಅವರು ಬಂದರು. ಪಾಠ ಪ್ರಾರಂಭವಾಯಿತು. ಹಿಂದಿನ ಹನ್ನೆರಡು ಅಕ್ಷರ ಬರೆಯಲು ಹೇಳಿದೆ. ಆರು ಅಕ್ಷರ ಮರೆತು ಬಿಟ್ಟಿದ್ದ. ಮತ್ತೆ ಅವುಗಳನ್ನು ಹೇಳಿ ಬರೆಸಬೇಕಾಯಿತು. ಆದರೆ ಮೊದಲಿನ ದಿನದಷ್ಟು ಸರಾಗವಾಗಿ—ಎರಡನೆಯ ಸಲವಾದರೂ—ಆ ಆರು ಅಕ್ಷರಗಳು ಬರಲಿಲ್ಲ. ನನ್ನ ತಾಳ್ಮೆಯೊಂದು ಕಡೆ ಕುಣಿಯತೊಡಗಿತು. ಇತ್ತ ಕರುಳು ಒಂದು ಕಡೆ ಬಳ್ಳಿಸರಿಯತೊಡಗಿತ್ತು. ಎರಡರ ಮಧ್ಯೆ ಈ ಪಾಠ ನಡೆದಿತ್ತು.

ನನ್ನ ಬುದ್ಧಿಯನ್ನೆಲ್ಲ ಉಪಯೋಗಿಸಿ ನಾಲ್ಕಾರು ಬಗೆಯಿಂದ ಅಕ್ಷರಗಳನ್ನು ಬರೆಯುವ ಕ್ರಮ ಹೇಳಿದೆ. ಒಂದೇ ಬಗೆಯ ಕ್ರಮವೇ ಒಳ್ಳೆಯದೇನೋ! ಏನು ಮಾಡಿದರೂ ಮೋಹನ ಹಿಂದಿನದಿನ ಕಲಿತ ನಾಲ್ಕು ಅಕ್ಷರ, ಮೊದಲಿನ ದಿನ ಕಲಿತ ಎರಡು ಅಕ್ಷರ-ಒಟ್ಟು ಆರು ಅಕ್ಷರಗಳನ್ನು ಬರೆಯಲು ಸಮರ್ಥನಾಗಲಿಲ್ಲ. ಹೊಸ ಅಕ್ಷರಗಳನ್ನು ಹೇಳಿರಿ—ಎಂದು 'ಆದೇಶ' ಬಂತು. ಹಳೆಯ ಅಕ್ಷರಗಳೇ ಬರುವದಿಲ್ಲ; ಹೊಸವು ಏಕೆ—ಎಂದೆ. 'ಯಾವು ಬರುತ್ತವೆ ಅವನ್ನು ಕಲಿಸಿದರಾಯಿತು' ಎಂದಳು. 'ಬರುವವನ್ನು ಕಲಿಸುವ ಕಾರಣವೇನು? ನಿನ್ನೆ ಬಂದು ಇಂದು ಬಾರದಿರುವ ವಿದ್ಯೆಗಾಗಿ ನನಗೆ ಸಂತಾಪವಾಗಿದೆ' ಎಂದೆ. 'ಸುಮ್ಮನೆ ಕಚೇರಿಗೆ ಹೋದರಾಯಿತು' ಎಂದಳು. ಅಂದು ರಜಾ ಹೇಳಿಕೊಂಡದ್ದು ಇದರ ಕಾರಣ ಅವಳಿಗೆ ಹೇಳಿದೆ. ಇಂದು ಹುಡುಗನಿಗೂ ರಜಾ ಕೊಡಿರಿ—ಎಂದಳು. ನನ್ನ ತಾಳ್ಮೆಯನ್ನು ಮತ್ತೆ ಕೆಣಕಿದಂತಾಯಿತು. ಇಲ್ಲ—ಇಂದು ಮೂಲಾಕ್ಷರಗಳನ್ನೆಲ್ಲ ಮುಗಿಸಿಯೇ ಏಳುವದು—ಎಂದು ಮತ್ತೆ ಮೋಹನನನ್ನು ತಡವಿದೆ.

ಗಂಗಾ-ಯಮುನಾ ಪ್ರವೇಶವಾಗಿತ್ತು. ತಾಯಿಯನ್ನು ನೋಡಿ ಅವುಗಳಿಗೆ ಸ್ಫೂರವೂ ಬಂತು. ಅವಳಿಗೆ ಒಳಗೆ ಹೋಗಲು ಆಜ್ಞಾಪಿಸಿದೆ. ಬರೆಯಲು ಹೇಳಿದೆ

ಅಶೋಕ 'ಅಣ್ಣ-ಪಾಟಿ,' 'ಅಣ್ಣ-ಪಾಟಿ' ಎಂದು ಮುಂದೆ ಬಂದ. ಇವನಿಗೆ ಬೇಕಂತೆ, ಕೊಡಿಸಿ ಬಿಡಿರಿ-ಎಂದು ಮತ್ತೆ ಮಹಾರಾಣಿಯ ಪ್ರವೇಶವಾಯಿತು. ಹೊರಗೆ ಹಾಕಿ ಬಾಗಿಲು ಬಡಿದುಕೊಂಡೆ.

ಮೋಹನ ಹೆದರುತ್ತಾನೆ. ಹಾಗೆಲ್ಲ ಮಾಡಬೇಡಿರಿ. ಬಾಗಿಲು ತೆಗೆಯಿರಿ—ಎಂದಳು. ಸಾಧ್ಯವಿಲ್ಲ ಎಂದೆ.

ಮತ್ತೊಂದು ಗಾಡಿ ಕೂಗಿತು. ಅಶೋಕ 'ಅಣ್ಣ ಗಾಡಿ!' ಅಂದ. ಮೋಹನ ಏಳಲು ನನ್ನ ಕಡೆಗೆ ನೋಡಿದ. ಇಂದಿನಿಂದ ಸ್ಟೇಶನ್ನಿಗೆ ಹೋಗುವಂತಿಲ್ಲವೆಂದು ಸುಗ್ರೀವಾಜ್ಞೆ ಹೊರಡಿಸಿದೆ. ನನ್ನ ಸಿಬ್ಬಂದಿಯೇ ಕಾಯ್ದೆ ಮುರಿಯಲನುವಾದರು ! 'ಮೋಹನ ಗಾಂಧೀ ಹೆಸರು' ಎಂದು ನನ್ನಾಕೆ ಅಂದಳು. ಅವನೂ ಎದ್ದ. ನನ್ನ ತಾಳ್ಮೆ ತಪ್ಪಿತು. ಮುಂಗೈ ಹಿಡಿದು ಎಳೆದೆ ಬಿಗಿಹಿಡಿದ ಅಳು ಮೋಹನನ ಬಾಯನ್ನು ದಾಟಿ ಹೊರಟಿತು. ಅಶೋಕನೂ ಅಳತೊಡಗಿದ ಅಣ್ಣನಿಗೆ ಯಾವ ಹಿಂಸೆಯೂ ಆಗಬಾರದಿವನಿಗೆ. ನಾನು ಜಬರಿಸಿ ಕುಳಿತುಕೊಳ್ಳುವಂತೆ ಕಿರಿಚಿಕೊಂಡೆ. ಅಶೋಕನ ಕೈಯಲ್ಲಿ ಆಟದ ಆನೆಯಿತ್ತು. ಅಳುತ್ತ ಇಳಿದುಬಂದು ಅದರಿಂದ ನನ್ನ ತಲೆಗೆ ಹಾಕಿದ. ಸಾವರಿಸಿ ಅವನ ತಾಯಿ ಎತ್ತಿಕೊಂಡಳು. ನಾನು ಎದ್ದು ಅವನಿಗೊಂದು ಕೊಡಹೋದೆ. ಅವನನ್ನು ತನ್ನ ತೋಳಮರೆಯಲ್ಲಿ ಎತ್ತಿ ಹಿಡಿದಳು ಆಕೆ. ನನ್ನ ಎತ್ತಿದ ಕೈ ಅವಳ ಕೆನ್ನೆಗೆ ಬಿತ್ತು. ಸರೋಜಾ ಹೆಸರು ಸಾರ್ಥಕವಾಯಿತು.

. . .

ಗಾಡಿ ಮತ್ತೊಮ್ಮೆ ಕೂಗಿಕೊಂಡು ಹೊರಟುಹೋಯಿತು. ನಮ್ಮ ರಥ ಮಾತ್ರ ನಿಂತಲ್ಲಿಯೇ ನಿಂತಿತ್ತು.

“ಈ ಪರಿ ಪಾಠ ಹೇಳುವುದು ಸಾಕು” ಎಂದು ನನ್ನಾಕೆಯ ಸುಗ್ರೀವಾಜ್ಞೆ ಹೊರಟಿತು. ಅದು ಸ್ವತಂತ್ರ ದೇಶದ ಸುಗ್ರೀವಾಜ್ಞೆಯಾಗಿ ಪಾಲಿಸಲ್ಪಟ್ಟಿತು.

ಮೂರು ದಿನದ ಪಾಠಕ್ರಮ ಅಲ್ಲಿಗೇ ಮುಗಿಯಿತು.

* * * *

ಕನ್ನಡ ಶಾಲೆಯ ಮಾಸ್ತರರ ತಾಳ್ಮೆಯ ಬಗ್ಗೆ ನನಗೆ ತುಂಬ ಆದರವಿದೆ. ಇಂಥ ನಾಲ್ವತ್ತು-ಐವತ್ತು ಹುಡುಗರನ್ನು ಅವರು ದಿನವೂ ಕಾಯುತ್ತಾರೆ. ಹೊಡೆಯಬಾರದೆಂಬ ಸುಧಾರಣೆಯನ್ನು ಪಾಲಿಸುತ್ತ ಬಂದಿದ್ದಾರೆ.

ಮಕ್ಕಳು ಕಲಿಯಬೇಕೆಂದು ಅವರೇನೂ ಹಟವಿಲ್ಲ. ಮಕ್ಕಳಿಗೇ ಹಟವಿದ್ದರೆ ಅವರದು ಅದಕ್ಕೆ ತಕರಾರಿಲ್ಲ. ತಮಗೆ ಬಂದ ನಾಲ್ಕು ಅಕ್ಷರ ಕಲಿಸುತ್ತಾರೆ.

ತಾಳ್ಮೆಯನ್ನು ಕಲಿಯಲು ನಮ್ಮಂಥವರೂ ಆ ಶಾಲೆಗೆ ಇನ್ನೂ ಹೋಗಬೇಕು.

ಆದರೆ ಯಾರಿಗೆ ಗೊತ್ತು ? ಅವರ ಬುದ್ಧಿ ಶಕ್ತಿಯನ್ನಳೆಯುವ ಬುದ್ಧಿ ನಮಗೆ ಬಂದರೆ—ಅವರ ತಾಳ್ಮೆಯೆಲ್ಲ ನಮ್ಮದಾದರೂ–ಅದನ್ನು ಪೆಚ್ಚು ಮಾಡಲು ಸಮಯ ಹತ್ತುವದಿಲ್ಲ. ‘ ತಾಯಿಯೇ ಶ್ರೇಷ್ಠ ಗುರು ’ ಎಂದು ಆಕೆಗೆ ಹೇಳಿದೆ. ‘ ಒಬ್ಬ ಶಾಲೆಯ ಮಾಸ್ತರರಿಗೇ ಹೇಳಿರಿ ’ ಎಂದಳು.

ನನ್ನ ಮೋಹನನ ಬುದ್ಧಿಯನ್ನೆ ಅವರು ಕಲಿತಾರೆಂಬ ಭಯವಿಲ್ಲ. ಆಗಲಿ ಎಂದೆ.

# ಕಾಯ್ದಿಟ್ಟ ಸ್ಥಳ

ಒಮ್ಮೆ ಮುಂಬಯಿಗೆ ಹೋಗಿ ಬರಬೇಕಾದರೆ ಈ ದಿನದಲ್ಲಿ ಸಾಕು ಬೇಕಾಗುತ್ತದೆ; ಬೇಕು ಸಾಕಾಗುತ್ತದೆ. ಗಾಡಿಯಲ್ಲಿ ಗರ್ದಿ. ನಾವು ಸಕಾಲಕ್ಕೆ ಗಾಡಿಗಾಗಿ ಕಾಯಬೇಕು. ಅದು ಹೊರಟಾಗ ನಾವು ಚಲಿಸಬೇಕು. ತಲಪಿದಾಗ ಇಳಿಯಬೇಕು ಭಾರತಕ್ಕೆ ಸ್ವಾತಂತ್ರ್ಯ ಬಂದದ್ದು ಎಲ್ಲಾ ಕ್ಷೇತ್ರಗಳಲ್ಲೂ ಎದ್ದು ಕಾಣುವಂತಿದೆ. ಯಾರೊ ಹಳಿ ಕಿತ್ತುತ್ತಾರೆ; ಡಬ್ಬಿ ಉರುಳಿಸುತ್ತಾರೆ. ಒಬ್ಬ ರೇಲ್ವೆ ಅಧಿಕಾರಿಯ ಇಷ್ಟ-ಅನಿಷ್ಟಗಳು. ಮಂತ್ರಿವರ್ಗದ ಪ್ರವಾಸಗಳು, ಡ್ರಾಯವ್ಹರನ ಚಪಲ ಚೇಷ್ಟೆಗಳು, ಗಾರ್ಡನ ಸಂಶಯ-ಸಂಕಷ್ಟಗಳು, ಸರಪಳಿ ಎಳೆಯುವವರ ಹಕ್ಕುಬಾಧ್ಯತೆಗಳು—ಇವೆಲ್ಲ ಸ್ವಾತಂತ್ರ್ಯಗಳಿಂದ ಸಮಯ ತಾನೆ ಸಾಧಿಸಬೇಕಲ್ಲದೆ ಮನುಷ್ಯಪ್ರಯತ್ನಕ್ಕೆ ನೂರು ವಿಘ್ನಗಳು ! ಒಬ್ಬೊಬ್ಬ ಮನುಷ್ಯನ ಭಿನ್ನ ಸಾಹಸಗಳು ಗಾಡಿಗಳ ನಿಯಮಿತತನಕ್ಕೆ ಹೇಗೆ ಸಹಕಾರಿಯಾಗಬೇಕು ?

ಅದಿರಲಿ; ನಾವಂತೂ 'ವೇಳಾಪತ್ರಿಕೆ'ಯ ಸಮಯ ಸಾಧಿಸಬೇಕಷ್ಟೇ. ಗಾಡಿ ಹೇಗೂ ತಡವೆಂದು ನಾವು ನಿರ್ಧರಿಸಿದರೆ ಒಬ್ಬ ಅಧಿಕಾರಿಯ ಅತುರಕ್ಕೆ ಅದು ಅಂದು ಸಕಾಲಕ್ಕೆ, ಇಲ್ಲವೆ ಹೊತ್ತಿಗೆ ಮುಂಚೆ ಯಾಕೆ ಹೊರಟಬಾರದು ? ಹಾಗೆ ಹೊರಟದ್ದೂ ಉಂಟು. ನಾನೇ ಹಲವು ಸಲ ಈ ಕಾರಣಗಳಿಂದ ಗಾಡಿ ತಪ್ಪಿಸಿಕೊಂಡಿದ್ದೇನೆ. ಅನ್ಯರ ತಪ್ಪಿನೆಣಿಕೆಯು ನಮ್ಮ ಅಧಿಕಾರ ಉಳಿಸಿಕೊಳ್ಳಲು ನಾವಾದರೂ 'ಕಾಣುವ' ತಪ್ಪು ಮಾಡಬಾರದಷ್ಟೆ.

ಮುಂಬಯಿ ಪ್ರವಾಸವೆಂದೆ. ಈಗಲೀಗ ನನ್ನ ಸ್ವಂತದ ಕೆಲಸಕ್ಕಾಗಿ ನಾನು ಸಂಚಾರಮಾಡಬೇಕಿಲ್ಲ. ಅಂಥ ಸ್ವಂತದ ಕೆಲಸಗಳೇನೂ ನನಗೆ ಎಂದೂ ಇದ್ದಿಲ್ಲವೆನ್ನಿ. ಈಗ ಸ್ವಾತಂತ್ರ್ಯದ ಫಲವಾಗಿ ಪರ್ಷತ್ತು, ನೂರಾರು ಕಮಿಟಿಗಳಲ್ಲಿ ಒಂದೆರಡು ಮಂಡಳಿಗಳ ಪ್ರತಿನಿಧಿ ನಾನು. ಸಂಚಾರಕ್ಕೆ

ಎರಡನೆಯ ವರ್ಗದ ಭತ್ಯ ದೊರೆಯುತ್ತದೆ. ಅದರಲ್ಲಿ ಹಣ ಉಳಿಸಿಕೊಂಡು 'ಗಾಂಧೀ ವರ್ಗ'ದಲ್ಲಿ ಸಂಚರಿಸುವುದನ್ನು ನಾನು ಈಗಲೀಗ ಬಿಟ್ಟಿದ್ದೇನೆ. ಉಳಿಯುವ ಹಣ ಯಾವ ಸತ್ಕಾರ್ಯಕ್ಕೂ ಉಪಯೋಗ ಬೀಳುವದಿಲ್ಲವೆಂಬ ಕಾರಣದಿಂದ. ಮುಂಬಯಿಗೆ ಈಗ ಘಂಟಾಘೋಷವಾಗಿ ಪ್ರಕಟಿಸಿ ಹೊರಡುವ ಭಾಗ್ಯ ನನ್ನದು. "ಶ್ರೀಯುತ ಇವರು ಮುಂಬಯಿಗೆ ಇಂಥ ವಿಚಾರಣಾ ಮಂಡಲದ ಸಭೆಗಾಗಿ, ಇಂಥ ದಿನ ಇಂಥ ಗಾಡಿಯಿಂದ ಹೊರಡುತ್ತಾರೆಂದು" ನಾನು ಸ್ಥಳ ಕಾಯ್ದಿರಿಸಹೇಳಿದ ದಿನವೇ ದಿನಪತ್ರಿಕೆಯಲ್ಲಿ ಮೂಡುತ್ತದೆ. ಸುದ್ದಿಗಾರರಿಗೆ ನಾವು ಏನಾದರೂ ಅನ್ನ ಒದಗಿಸಬೇಕಾಗುತ್ತದೆ. ಅವರು ಮಧ್ಯೆ ಮಧ್ಯೆ ಇಂಥ ಉಪ್ಪಿನಕಾಯಿಗಳನ್ನೂ ನಮ್ಮಿಂದ ಕಸಿಯದಿರುವದಿಲ್ಲ.

ಮುಂಬಯಿಗೆ ನಾನು ಹೊರಡುವದು ಪ್ರಕಟವಾದ ಮೇಲೆ ಅನೇಕ ಕೆಲಸ ಕಾರ್ಯಗಳು ಆಪ್ತಮಿತ್ರರ ಭಿಡೆ-ಭಾರಗಳಾಗಿ ನನ್ನ ಹೆಗಲೇರುತ್ತವೆ. ಮಂತ್ರಿಗಳನ್ನು ಕಾಣುವುದರಿಂದ ಮೊದಲುಮಾಡಿ ಅನೇಕ 'ವಶೀಲಿ'ಯ ಮಾತುಗಳೂ ಮತ್ತು ಅಂತಿಂಥ ಸಾಮಾನುಗಳನ್ನು ತರುವುದಕ್ಕಾಗಿ ಆಜ್ಞೆ ಬೇಡಿಕೆಗಳೂ—ಅಲ್ಲದೆ ಅಲ್ಲಿ ಕೆಲಸ ಮಾಡುತ್ತಿರುವ, ಕಲಿಯುತ್ತಿರುವ ತಮ್ಮ ಮಕ್ಕಳನ್ನು ಕಂಡುಬಾರೆಂದು ಹೇಳುವ ಹಿರಿಯರ ಮಾತುಗಳನ್ನೂ ನಾನು ಹೊತ್ತುಕೊಳ್ಳಬೇಕಾಗುತ್ತದೆ. ಅಲ್ಲದೆ ತಲುಪಿಸುವ ಸಾಮಾನುಗಳ ಗಂಟು-ಮೂಟೆಗಳೂ ಹೆಗಲೇರುತ್ತವೆ. ಒಳ್ಳೆಯ ತುಪ್ಪ, ಫರಾಳ ಗಂಟು, ಲೈನ ಪೇಟೆಯ ಫೇಡೆ, ಶಿರಸಿಯ ಅಡಿಕೆ, ಮೆಂತೆದ್ಹಿಟ್ಟು, ಚಟ್ನಿಪುಡಿ, ಅಳ್ಳಿಟ್ಟು ಇಂಥವೆಲ್ಲಾ ಒಯ್ಯುವದಾದರೆ ಹಣ್ಣು-ಹಂಪಲ, ದೊರೆಯದ ಔಷಧ, ಹೊಸ ಪುಸ್ತಕಗಳು, ಸುಲಭಬೆಲೆಯ ಬಟ್ಟೆ, ಅಪರೂಪ ಜಿನಸು—ಇನ್ನೇನಾದರೂ ತರಬೇಕೆಂದು ಹಣಕೊಟ್ಟು ಕೆಲವರು, ಆ ಮೇಲೆ ಕೊಡುವುದೆಂದು ಕೆಲವರು ಬಿನ್ನವಿಸಿರುತ್ತಾರೆ. ಮೊದಮೊದಲು ಕಾಳಬಾದೇವಿಯ 'ಇಂಥಲ್ಲಿ' ಈ ಪತ್ರ ಒಯ್ದು ಕೊಟ್ಟು ಉತ್ತರ ತರಬೇಕೆಂದು ಒಬ್ಬಿಬ್ಬರು ವ್ಯಾಪಾರಿಮಿತ್ರರು ವಿಧಿಸುತ್ತಿದ್ದರು. ಅವರಿಗೆ ಅಂಚೆಯ ಖಾತೆಯ ಗುರುತು ಮಾಡಿಕೊಟ್ಟು, ನಾನು ಈಗಲೀಗ ಮೈ ಉಳಿಸಿಕೊಂಡಿದ್ದೇನೆ. ಆದರೆ ಸಾರ್ವಜನಿಕ ಜೀವನದಲ್ಲಿ ಎಲ್ಲದರಿಂದಲೂ ಉಳಿದುಕೊಳ್ಳು

ಮಾತಿಲ್ಲ ನೋಡಿರಿ. ನನಗೆ ಮೆಂಬರಿಕೆ ಕೊಡಿಸಿದವರು, ಸ್ನೇಹಿತರು, ಓಣಿಯ ಅಣ್ಣ-ತಮ್ಮಂದಿರು, ಅಕ್ಕ-ಅಮ್ಮಂದಿರು, ಓದುವ ಮಕ್ಕಳು. ಅದೇ ಮದುವೆಯಾಗಿ ಮನೆ ಹುಡುಕುತ್ತಿರುವ ಅಳಿಯದೇವರುಗಳ ಮಾವ ಅತ್ತೆಯರು—ಇವರ ಸಂದೇಶಗಳನ್ನೆಲ್ಲ ನಿಷ್ಠುರದಿಂದ ನಿರಾಕರಣೆ ಮಾಡಲು ಸಾಧ್ಯವೆ? 'ಮರೆತೆ' ನೆನ್ನಬಹುದು—ನಂತರ. ಈಗಲೇ 'ಆಗದು' ಎನ್ನುವುದು ಹೇಗೆ?

ಈ ಸಲ ಮುಂಬಯಿಯಲ್ಲಿ ಇಂಥ ಹಲವು ಕೆಲಸಗಳನ್ನು ಮುಗಿಸಿಕೊಂಡು ಸಭೆಗೆ 'ಹಾಜರಿ' ಹಾಕಿ ಪ್ರವಾಸಭತ್ಯಕ್ಕೆ ಮಾರ್ಗಮಾಡಿಕೊಂಡು ಹುಬ್ಬಳ್ಳಿಯ ಮತ್ತೊಂದು ಸಭೆಗಾಗಿ ಅವಸರದಿಂದ ಮರಳಿದೆ. ಆದರೆ ನಮ್ಮ ಬಂಧುಗಳೊಬ್ಬರು ಪುಣೆಯಲ್ಲಿಳಿದು ಒಬ್ಬ ಚಿತ್ರಕಾರನಲ್ಲಿ ಕೊಟ್ಟ 'ರಾಮ'ರ ಚಿತ್ರದ ಎನ್ಲಾರ್ಜಮೆಂಟು ತರಲು ವಿಧಿಸಿದ್ದರು. ನಾನು ಅವರ ಮಾತನ್ನು ಮೀರುವಂತಿಲ್ಲ. ನನ್ನ ಸಂಸಾರಯಾತ್ರೆಯಲ್ಲಿ ಚುಕ್ಕಾಣಿಯಂತೆ ನನಗೆ ಮಾರ್ಗಸೂಚಿಯಾಗಿದ್ದವರು ಅವರು. ಪುಣೆಯಲ್ಲಿಳಿದು ಕೂಡಲೇ ಮುಂದಿನ ಮೇಲ್‌ಗಾಡಿಯ ಎರಡನೆಯ ವರ್ಗದ ಒಂದು ಸ್ಥಳ ಕಾಯ್ದಿರಿಸಿಯೇ ಊರಲ್ಲಿಸೇರಿದೆ.

ನಾನು ಓದಿದ್ದು ಪುಣೆಯ 'ಡೆಕ್ಕನ್' ನಲ್ಲಿ. ಆಗಿನ ಹಲವು ಸಿಹಿ-ಕಹಿನೆನಪುಗಳು ಊರ ರಸ್ತೆಯಗುಂಟ ನನ್ನ ಬೆಂಬತ್ತಿದವು. ಅಂದಿನ ಪುಣೆ ಇಂದು, ಅಂದಿನ ನಾನು ಇಂದು ಬೆಳೆದಂತೆ ಬೆಳೆದಿದೆ; ಆದರೆ ಪುಣೆಯೆಂಬ ಗುರುತು ಇಟ್ಟುಕೊಂಡೇ ಬೆಳೆದಿದೆಯಷ್ಟೆ—ನನ್ನಂತೆ! ಅಂದಿನ ನನ್ನ ಮುಖ ಇಂದು ಅಗಲವಾಗಿರಬಹುದು. ದೇಹ ಉಬ್ಬಿರಬಹುದು; ಎತ್ತರವಾಗಿರಬಹುದು ನಾನು. ಆದರೆ ನನ್ನದೇಬ ಒಂದು ಅವಯಗಳ ಹೊಂದಿಕೆ, ಅಂಗ ಸೌಷ್ಟವ ನನ್ನದೇ ತಾನೆ! ಹಾಗೆ. ಡೆಕ್ಕನ್‌ಕಾಲೇಜಿನಲ್ಲಿದ್ದಾಗ ಊರಲ್ಲಿ ನಮ್ಮ ಸಂಚಾರ ಅಷ್ಟಾಗಿದ್ದಿರಲಿಲ್ಲವಾದರೂ ಸೂಟಿಯ ದಿನದಲ್ಲಿ ನಾವು ಸುತ್ತದ ಗಲ್ಲಿಯುಂಟೇ? ನೋಡದ ನಾಟಕಗಳುಂಟೇ? ಅಂದಿನ ನನ್ನ ಜತೆಯ ಕಾಲೇಜ ಮಿತ್ರರು ಇಂದು ಎಲ್ಲೆಲ್ಲಿಯೋ ಹಂಚಿ ಹೋಗಿದ್ದಾರೆ. ಕೆಲವರು ಅಲ್ಲೇ ಇದ್ದಿರಬಹುದು; ಆದರೆ ಸಂಪರ್ಕವಿಲ್ಲ. ನನ್ನ ಪರಚಿತ

ಬೀದಿಗಳಲ್ಲೆಲ್ಲ ಹುಚ್ಚಿದ್ದು ಒಮ್ಮೆ ಹರಿದಾಡಬೇಕೆಂದು ಆಣೆಗಳ ಬಸ್ಸು ಹತ್ತಿ ಸುತ್ತಿದೆ. 'ರಾಯು'ರ ಚಿತ್ರ ದೊರಕಿಸಿದೆ. ಸಿಕ್ಕಷ್ಟನ್ನು ತಿಂದೆ. ಮತ್ತೆ ಎದುರಿಗೆ ಬಂದ ಒಂದಿಬ್ಬರು ಪರಿಚಿತರನ್ನು ತಪ್ಪಿಸಿ ಗಲ್ಲಿಬಿದ್ದು ಹಾದಿ ಯಾವುದೋ ಹಳೆಯ ನೆನಪಿನ ಚೇತನದಿಂದ ವಿರಮಿಸುವ ಬೀಳಿದೆ. ಹೇಗೂ ನನ್ನ ಸ್ಥಳ ನನಗೆ ಇದೆ. ಸುಖವಾಗಿ ಮಲಗಿ ಹೋಗಬಹುದೆಂಬ ಧೈರ್ಯವೊಂದು ನನ್ನ ಹುಚ್ಚಿಗೆ ಪುಟಗೊಟ್ಟಿತ್ತು

ಒಂದು ಸಿನೆಮಾ ನೋಡಲು ಚಪಲವಾಯಿತು. ಆಗಲಿ ಎಂದು ಒಂದು ಚಿತ್ರಮಂದಿರವನ್ನು ಹೊಕ್ಕೆ. ಚಿತ್ರಮಂದಿರಗಳೆಂದರೆ ರೇಲ್ವೇ ಸ್ಟೇಶನ್ನಿನಂತೆಯೇ ಗದ್ದಲ ವಿವಿಧ ರುಚಿಯ ವಿವಿಧ ಥಾಟಿನ ವೇಷಭೂಷಣಗಳ ಸಂತೆಯೊಂದು ನೆರೆದಿತ್ತು. ಒಟ್ಟಿನಲ್ಲಿ ರೇಲ್ವೇಸ್ಟೇಶನ್–ಲಗೇಜ+ರಂಗು-ರಂಗು–ಅವಸರ+ಲೀಲಾಜಾಲ=ಸಿನೆಮಾಗೃಹವೆನ್ನಬಹುದು

ನನಗೆ ಚಿತ್ರ ಅಷ್ಟು ಹಿಡಿಯಲಿಲ್ಲ. ಗಾಡಿಯ ನೆನಪೂ ಆಗ ಮಧ್ಯದಲ್ಲಿ ಎದ್ದೆ. ಆದರೆ ಎಷ್ಟವ ನಾನೊಬ್ಬನೇ–ಹಲವರ ಹಶ್–ಹುಶ್‌ಗೆ ಗುರಿಯಾಗಿ ಹೊರಬಂದೆ ೮ ಗಂಟೆಯಾಗಿತ್ತು. "ಬಾದಶಾಹಿ"ಗೆ ಹೋಗಿ ಊಟ ಮಾಡಿ ಸ್ಟೇಶನ್ನಿಗೆ ಧಾವಿಸಿದೆ. ಮುಂಬಯಿ ಗಾಡಿ ಬಂದುಬಿಟ್ಟಿತ್ತು. ಗದ್ದಲವೋ ಗದ್ದಲ. ನನ್ನ ಡಬ್ಬಿಯನ್ನು ಹುಡುಕಿ ನನ್ನ ಸ್ಥಳ ಗುರುತಿಸಬೇಕಾದರೆ ಗಾಡಿ ಸಿಳ್ಳು ಹಾಕಿತು. ಹಮಾಲನ ಸಹಾಯದಿಂದ, 'ರಾಯು'ರ ಕೃಪೆಯಿಂದ ಗಾಡಿಯಲ್ಲಿ ಸೇರಿಕೊಂಡೆ.

ಅದು ಆರರ ಕೋಟಡಿ. ಎದುರು ಬೆಂಚಿನಲ್ಲಿ ಮೂವರು ಕುಳಿತಿದ್ದರು. ಒಳಗಿನ ದೀಪ ಮಂಕಾಗಿತ್ತು. ಮೇಲಿನ 'ಬರ್ಥ್' ಇಳಿಬಿದ್ದು ಕೆಳಗೆ ಕುಳಿತವರಮೇಲೆ ನೆರಳು ಬಿದ್ದಿತ್ತು. ಮಧ್ಯೆ ಒಬ್ಬ 'ಭರ್ಜರಿ' ವೇಷದ ಮಹಿಳೆ! ಎಡಬಲಕ್ಕೆ ಇದ್ದವರು ಎಂಥವರೋ ಇಬ್ಬರು ಗಂಡಸರು—ನಾನು ಸೇರಿದಾಗ ಇದ್ದವರು—ಗಾಡಿ ಚಲಿಸುತ್ತಿದ್ದಂತೆಯೇ ಇಳಿದು ಹೋದರು. ನಾನು ಸುಧಾರಿಸಿಕೊಂಡು, ಮುಖ ಒರಸಿಕೊಂಡು ನನ್ನ ಸಾಮಾನುಗಳನ್ನು ಕ್ರಮವಾಗಿಟ್ಟು 'ರಾಯು'ರ ಚಿತ್ರ ತಲೆಯ ಕಡೆಗಿರಿಸಿ ಹಾಸಿಗೆ ಬಿಡಿಸಿ ಹೊದಿಕೆ ಜಾಡಿಸಿಟ್ಟು, ಕೊಂಡುತಂದ ಸಾಮಾನುಗಳನ್ನೆಲ್ಲಾ ತಂದಿರುವೇನೋ ಎಂದೊಮ್ಮೆ ನೋಡಿಕೊಂಡೆ. ಎಲ್ಲಾ ಇದ್ದುವು. ಆದರೆ ನಾನು

ಮುಟ್ಟಿಸಬೇಕಾದ ಘರಾಣದ ಗಂಟು ಒಂದು ಮಂದೆತ್ತು ತಿರುಗಿ ಸನ್ನಿಡಸೆ ಪ್ರಯಾಣ ಬೇಕಿತ್ತು. ಇರಲಿ ಎಂದುಕೊಂಡೆ. ಅವಸರದಿಂದಾಗಿ ಎದೆ ಬಡಿದುಕೊಳ್ಳುತ್ತಿತ್ತು. ಮುಖ ಬೆವರುತ್ತಿತ್ತು. ಲ್ಯಾವೆಟ್ರೀನ್‌ಗೆ ಹೋಗಿ ಮುಖ ತೊಳೆದು ಬಂದೆ. ರೈಲು ಚೊಂಬಿನಿಂದ ಒಂದು ಗುಟುಕು ನೀರು ಕುಡಿದೆ. ಕೊಂಡು ತಂದ ಒಂದೆರಡು ಪೇಪರುಗಳನ್ನು ಬಿಡಿಸಿ ನೋಡಬೇಕೆನ್ನುವಾಗ ನನ್ನ ದೃಷ್ಟಿ ಎದುರು ಬೆಂಚಿನ ಮೇಲೆ ಸುಳಿಯಿತು. ಆ ಮಹಿಳೆ ಸುಮ್ಮನೆ ಕುಳಿತಿದ್ದಾಳೆ. ಕೊಟಡಿಯ ಇನ್ನು ನಾಲ್ಕು ಸ್ಥಳಗಳು ಖಾಲಿ. ಇಡೀ ಡಬ್ಬಿಯಲ್ಲಿ ನಾನು ಮತ್ತು ಆ ಮಹಿಳೆ ಇಬ್ಬರೇ !

ಇದನ್ನು ಓದುವ ನಿಮಗೆ ಇನ್ನು 'ಮಜಾ' ಇದೆ ಎನಿಸಿರಬಹುದು. ನಿಮಗೆ ಹಲವು ವಿಚಾರಗಳು ಬರಬಹುದು. ನನಗೆ ಮಾತ್ರ ವಿಚಾರಶಕ್ತಿ ಮಂಕಾಗಿತ್ತೋ ಉಡುಗಿ ಹೋಗಿತ್ತೋ ಎಂಬ ಅರಿವೇ ಇಲ್ಲದಾಯಿತು; ಒಂದು ಕ್ಷಣ ಮತ್ತೆ 'ಸದಾಜಾಗ್ರತ' ವಾದ ಚಿತ್ತ ಚಿಂತನೆಗೆ ಯಾವಾಗ ಆರಂಭಿಸಿತ್ತೊ ನಾನರಿಯೆ. ಆದರೆ ಚಿಂತನೆ ಹಲವು ದಾರಿಗಳನ್ನು ಬಳಸಿ ಏನನ್ನೊ ಹುಡುಕುತ್ತಿತ್ತು; ದಣಿದು ಹೇಳಹೆಸರಿಲ್ಲದೇ ಹೋಗಿತ್ತು. ಅದರ ಸ್ಥಳದಲ್ಲಿ ಇನ್ನೇನೋ ಒಂದು ಶಕ್ತಿಯನ್ನು ಉಡುಗಿಸಿತ್ತು. ಆದರೆ 'ಇವಳಾರು?' ಎಂಬ ಒಂದು ಸಹಜ ವಿಚಾರ, ಯಾರಿರಬಹುದೆಂಬ ನಾನಾ ಬಗೆಯ 'ಗಿಹುದು' ಗಳನ್ನು ಕಲ್ಪಿಸುತ್ತಿತ್ತು. ಅವಳ ಗೊಡವೆ ನನಗೇಕೆ ? ಎಂದು ಒಂದು ವಿವೇಕ (!) ಕೇಳಿದರೆ 'ಮಾನವ ಸಹಜ ಕುತೂಹಲವೂ ಅವಿವೇಕವೇ ?' ಎಂಬ ತರ್ಕ ಪ್ರಶ್ನಿಸುತ್ತಿತ್ತು. ಅವಳು ಯಾರಿದ್ದರೇನು? ಅದು ಅವಳು—ಒಬ್ಬ ಹೆಣ್ಣು. ಮುಖ ಸ್ಪಷ್ಟವಾಗಿ ಕಾಣುತ್ತಿದ್ದಿಲ್ಲ; ದೃಷ್ಟಿಸಿ ನೋಡಿದ್ದರೆ ಕಾಣಬಹುದಿತ್ತು. ಆದರೆ ಆ "ಧೈರ್ಯ" ವಾಗಲಿಲ್ಲ. ಅದರೆ ನೋಡಿದ—ಇಲ್ಲವೆ ಕಂಡದ್ದೆಂದರೆ ಅವಳ ವೇಷ ಭೂಷೆ, ಅವಳ ಪರಿವಾರವಾದ ಸಾಮಾನು-ಸಟ್ಟು. ಅವಳಿಗೆ ವೇಷ ಒಪ್ಪಿತ್ತೋ ನನಗೆ ತಿಳಿಯದು. ಆದರೆ ಅವಳ ಬಟ್ಟೆ ಎಲ್ಲ ಜರತಾರಿ. ಕಾಲಮೆಟ್ಟೂ ಜರತಾರಿ ! ಅವಳ ಪಾದಾರವಿಂದ ದರ್ಶನಕ್ಕೆ ಯಾವ ಧೈರ್ಯದ ಕಾರಣವೂ ಇದ್ದಿಲ್ಲ. ಜತೆಗೆ ಒಂದು ಲೆದರ್ ಸೂಟ್‌ಕೇಸು; ಸ್ಟೇನ್‌ಲೆಸ್ಸೊ- ಬೆಳ್ಳಿಯದೋ ಘಂಟಾಳ

ಪೆಟ್ಟಿಯೊಂದು, ಅಂಥದ್ದೇ ಒಂದು ಟ್ರಂಕು ಜೊತೆಯು: ಹಾಸಿಗೆಯೂ ಜೊತೆ
ಬಾಳುವಂಥದೇ. ಹೊದಿಕೆಗೆ ಕಸೂತಿಯ ಕಾಶ್ಮೀರೀ ಶಾಲು—ಛೇ: ಅದೆಲ್ಲ
ನನಗೆ ಯಾಕೆ ಬೇಕು ? ಈ ಎದುರು ಸ್ಥಳದಿಂದ ನಾನು ಕದಲ ಬೇಕು
ಎಂದೊಮ್ಮೆ ವಿಚಾರ ಬಂದರೆ. "ನನ್ನ ಕಾಯ್ದಿರಿಸಿದ ಸ್ಥಳವಿದು ! ನಾನೇಕೆ
ಬದಲಿಸಲಿ ?" ಎಂಬ ಕುತರ್ಕ. ಪೇಪರು ಮುಖಕ್ಕೆ ಹಿಡಿದುಕೊಂಡು ಕುಳಿ
ತಿದ್ದೆ. ಏನು ಅನರ್ಥ ಕಾದಿದೆಯೋ ಎಂಬ ಭಯವೂ ಬೇರೆ. ಪ್ರಸಂಗಕ್ಕೆ
ಇರಲಿ—ಎಂದು ಎಳೆಯುವ ಸರಪಳಿ ನೋಡಿ ಇಟ್ಟುಕೊಂಡೆ. ನಾನು
ಗಂಡಸು! ಈ ಭಯವಿರಬಾರದು. ನನ್ನಷ್ಟಕ್ಕೆ ನಾನು ಇದ್ದು ಬಿಟ್ಟರಾಯಿತು.
ದಣಿದಿದ್ದೇನೆ; ಮಲಗಿದರಾಯಿತು— ಎಂದು ನಾಲ್ಕನೆಯ ಸಲ ನಿಶ್ಚಯ
ಮಾಡಿಕೊಂಡೆ. ತಲೆದಿಂಬಿಗೆ 'ರಾಯರ' ಚಿತ್ರವಿದ್ದ ಮನದಲ್ಲಿಯೇ ಕೈ
ಮುಗಿದು "ಗುರುವೇ, ಕಾಪಾಡು" ಎಂದೆ

ಆಕೆಯು ಒಬ್ಬಳೇ ಎಲ್ಲಿಗೆ ಹೊರಟಿರಬಹುದು ? ಗಾಡಿಯಲ್ಲಿ ಮತ್ತೆ
ಪರಿಚಿತರು ಯಾರಾದರೂ ಇದ್ದಾರೆಯೇ ? ಗಾಡಿ ಬಿಡುವಾಗ ಇಳಿದವರು
ಯಾರವರು? ಅವರು ಗಾಡಿಯಲ್ಲಿಯೇ ಇರುವರೇ ?— ಇಳಿದೇ ಹೋದರೇ?
ಇಲ್ಲಿ ಯಾಕೆ ಬಂದಿದ್ದರು? ನೋಡುವಾಗ ಅಂಥ ಸಂಭಾವಿತರಂತೆ ಕಾಣಲಿಲ್ಲ
ಅವರು. ಈ ಹೆಣ್ಣು 'ಮಹಿಳೆ'ಯೋ ಹೌದೋ—ಏನೋ—ನನಗೆ ಯಾಕೆ
ಬೇಕು ?

ಗಾಡಿಯಲ್ಲಿ ಎಷ್ಟು ಸಲ ನಾನು ಸಂಚರಿಸಿಲ್ಲ ? ಜತೆಯಲ್ಲಿ ಅನೇಕ
ಮಹಿಳೆಯರಿರುತ್ತಿದ್ದರು; ಗಂಡಸರೂ ಇರುತ್ತಿದ್ದರು. ಯಾವ ಭಯದ ಚಿಂತೆಯೂ
ಇಲ್ಲದೆ ನಾನು ಸಂಚರಿಸಿಲ್ಲವೇ ? ಸಂಚಾರದಲ್ಲಿ ದುಡ್ಡಿದ್ದರೆ ಯಾತರ
ಚಿಂತೆಯೂ ಇರಬೇಕಾಗಿಲ್ಲ ಕಳ್ಳರ ಭಯವೊಂದಿದ್ದೀತು ! ಆದರೆ ನಾನು
ಯಾವಾಗಲೂ ಹಣ ಕಳೆದುಕೊಂಡುದಿಲ್ಲ ಜತೆಗೆ ಮರೆತು ಹೋದವರ
ಸಾಮಾನುಗಳನ್ನು ಸಂಪಾದಿಸಿದ ಧೀರ ನಾನು. 'ಪಾಸಾ' ಇಲ್ಲದ ಸಾಮಾನು
ಇನ್ನು ಯಾರದೋ ಪಾಲಾಗುವದಕ್ಕಿಂತ ನನ್ನ ಪಾಲಾದರೇನು ತಪ್ಪು ?
ನಾನು ಜಗತ್ತಿನ ಅನೇಕ ಅವಿವೇಕಿಗಳಲ್ಲಿ ಒಬ್ಬ. ವಿವೇಕಿಯಲ್ಲವೇ ? ನನ್ನ
ವಿದ್ಯಾ-ಬುದ್ಧಿ-ಸಂಸ್ಕಾರಗಳು ಅಷ್ಟೇನು ಹಾಳಲ್ಲ. ಅದೇ ಕಾರಣವಿರಬೇಕು—

ನನ್ನ ಈ ಬಗೆಯ ಅಧೈರ್ಯದ ಇರುವಿಕೆಗೆ. ಸಂಸ್ಕಾರವೆಂಬುದು ಮನುಷ್ಯ
ನಿಗೆ ಅನೇಕ ಸಂದರ್ಭಗಳಲ್ಲಿ ಯಾವ ರಕ್ಷೆಯನ್ನೂ ಕೊಡದೆ ಹೋಗು
ತ್ತದೆ. ನನ್ನ ವಿದ್ಯಾ—ವಿನಯ ಸಂಪನ್ನತೆಯಿಂದ ನಾನು ಬಹುಜನಕ್ಕೆ
ಆದರ್ಶ 'ಮುಂದಾಳು'ಗಿದ್ದೇನೆ. ನಾಲ್ಕು ಮಕ್ಕಳ ತಂದೆ ನಾನು. ನನ್ನ
ಮನೆಯಾಕೆ ಗೌರವಸ್ಥ ಮನೆತನದ ಮಗಳು. ನನ್ನ ಕೂಡ ಈ ಹನ್ನೆ
ರಡು ವರುಷದ ಸಂಸಾರದಲ್ಲಿ ನನ್ನೊಡನೆ ಸಮರಸವಾಗಿ ಬೆರೆತು. ನನ್ನ
ಆಸೆ— ಆಕಾಂಕ್ಷೆಗಳನ್ನು ತನ್ನ ಸರಸಸಜ್ಜನಿಕೆಯಿಂದ ಪೂರೈಸಿಕೊಂಡು
ಬಂದಿದ್ದಾಳೆ. ಒಂದೆರಡು 'ಇಜ್ಜೋಡು'ಗಳನ್ನು ತನ್ನ ಸ್ತ್ರೀ ಸಹಜ
ಅನುಕಂಪದಿಂದ 'ಜೋಡಿ'ಸಿದ್ದಾಳೆ. 'ಇಂಥವರ ಕುಟುಂಬ' ಎಂಬ
ಎತ್ತರದ ಇರುವಿಕೆಯಿಂದ ನನ್ನ ಗೌರವವನ್ನು ತನ್ನ ಸ್ತ್ರೀ ಮಂಡಲಿಗಳಲ್ಲಿ
ಎತ್ತಿ ಹಿಡಿದಿದ್ದಾಳೆ. ನನ್ನ ಔನ್ನತ್ಯದ ಸಾರಿಕೆಯಲ್ಲಿ ತನ್ನನ್ನೂ ಎತ್ತರಿಸಿ
ಕೊಂಡಿದ್ದಾಳೆ. ಮಕ್ಕಳ ಆರೋಗ್ಯ ಕಾಪಾಡಿದ್ದಾಳೆ. ಅವರ ವಿದ್ಯಾಭ್ಯಾಸಕ್ಕೆ
ತನ್ನನ್ನು ತೇಯುತ್ತಿದಾಳೆ. ನನ್ನ ಹಲವು ಬಗೆಯ ಕೆಲಸ ಕಾರ್ಯಗಳಿಗೆ ಮನೆಯ
ಚಿಂತೆ ಅಡ್ಡ ಬರದಂತೆ ನೋಡಿಕೊಂಡಿದ್ದಾಳೆ. ತನ್ನ ಆಹಾರ—ವಿಹಾರ
ಗಳನ್ನು ತನ್ನ ರುಚಿಗೆ ತಿದ್ದಿದಾಳೆ. ನನ್ನ ಬಟ್ಟೆಬರೆಗಳ ಓರಣವೂ ಅವಳಿಗೇ
ಸೇರಿದ್ದು. ನನ್ನ 'ಹೊರಗಿನ' ಕೆಲಸ ಕಾರ್ಯಗಳಲ್ಲಿ ಅವಳು ಯಾವ ಕಾರ
ಭಾರವನ್ನೂ ಮಾಡಿದ್ದಿಲ್ಲ. ತನ್ನ ಕ್ಷೇತ್ರದಲ್ಲಿ ತಾನೆ ರಾಣಿಯಾಗಿ ನಮ್ಮನ್ನೆಲ್ಲ
ಸತ್ಪ್ರಜೆಗಳಂತೆ ಕಾಪಾಡಿದಾಳೆ. ನನ್ನ 'ಅರಸು'ತನವನ್ನು ಒಪ್ಪಿ-ಒಲಿದು,
ಸೋತು ಗೆದ್ದಿದಾಳೆ. ನನಗೆ ಮನೆ ಎಂಬ ಚಿಂತೆಯೇ ಇಲ್ಲ.

ಮನೆಯು ಚಿಂತೆಯದಾದರೆ ಈ ಕಾಲದಲ್ಲಿ ಯಾವ ಬಗೆ? [illegible]
ಲೌಕಿಕದ ಜಂಜಡವಾದರೆ ಮನೆ ಅಲೌಕಿಕ ಲೋಕ[illegible]? ಆದರೆ
ಬಹುಮಟ್ಟಿನ ಜನ ಮನೆಯನ್ನು 'ಕುರುಕ್ಷೇತ್ರ' ಮಾಡಿ ಹೊರಗೆ ಶಾಂತಿ
ಒಪ್ಪಂದ ಸಾಧಿಸುವ ಭ್ರಮೆಯಲ್ಲಿ ದಿನ ದೂಡುತ್ತಿಲ್ಲವೇ? ಕಾರಣ, ಅಕಾರಣ
ವಾಗಿರಬಹುದು; ಇಲ್ಲವೆ 'ಇಲ್ಲದ ಕಾರಣ'ಗಳನ್ನು ಕಲ್ಪಿಸಿ ಹೊರಗಿನ
ಅಶಾಂತಿಯನ್ನು ಮನೆಯಲ್ಲಿ ಸುರಿದರೆ ನಿಷ್ಕಾರಣವಾಗಿಯಾದರೂ ಮನೆ
ಕುರುಕ್ಷೇತ್ರವಾಗದಿದ್ದೀತೆ? ಮನೆಯ ಜನ ಈ [illegible] ಮುಖ
ನೋಡಿ ಎಷ್ಟು ದಿನ ಮಣೆಹಾಕಬೇಕು? ಅವರಿಗೂ ಅಸರಿಕೆ ಬೇಸರಿಕೆಗಳಿಲ್ಲವೆ?

ಅವನಿಂದ ಮನೆ ಆರ್ಥಿಕವಲ್ಲದೆ ಯಾವ ಔದಾರ್ಯವನ್ನೂ ಬಯಸದಿರ ಬೇಕೆ? ಛೀ! ಎಷ್ಟು ಕುಟುಂಬ ಇಂಥ ವಿಪತ್ತಿನಲ್ಲಿ ಸಿಲುಕಿ ಕೊಳೆಯುತ್ತಿಲ್ಲ.

*   *   *   *

ಪೇಪರು ಜಾರಿ ಕೆಳಗೆ ಬಿದ್ದಿತ್ತು. ಮಹಿಳೆ ಯಾವಾಗಲೋ ಒರಗಿಕೊಂಡಿದ್ದಳು. ಶಾಲು ಅರೆಬರೆಯಾಗಿ ಅವಳನ್ನು ಹೊದ್ದಿತ್ತು. ಅವಳಿಗೆ ನಿದ್ರೆ ಬಂದಿತ್ತೋ ತಿಳಿಯದು. ನನ್ನ ಮನಸ್ಸಿನ ಈ ತುಮುಲಕ್ಕೆ ಈ ಅಪರಿಚಿತನವೇ ಕಾರಣವಾದಂತೆ! ಅವಳು ನಿಶ್ಚಿಂತಳೇ? ಇದ್ದರೆ ಯಾವ ಚಿಂತೆ ಇದ್ದೀತು? ತನ್ನ ಚಿಂತೆಯೋ—ನನ್ನ ಚಿಂತೆಯೋ? ಅವಳಿಗೆ ತನ್ನದಾದ ಸಂಸಾರವಿದೆಯೆ? ಇದ್ದರೆ ಹೀಗೆ ಏಕಾಕಿಯಾಗಿ ಎಲ್ಲಿಗೆ ಹೊರಟಿದ್ದಾಳು! ಕೆಲಸದ ಮೇಲಿರಬಹುದೆ? ಯಾವ ಕೆಲಸ? ಪತಿ ಎಂಬವನಿದ್ದಾನೆ. ಅವನೆಡೆಗೆ ಹೊರಟಿರಬಹುದೆ? ಮಕ್ಕಳು ಇದ್ದಿರಲಾರರು. ಇದ್ದರೆ ತಾಯಿ ಯಾವಳಿಗೆ ಮಕ್ಕಳು ರಕ್ಷೆಯಾಗಿ ಯಾವಾಗಲೂ ಜತೆಯೇ ಇರುವುದಿಲ್ಲವೇ? ನನ್ನಾಕೆ ನಾನಿಲ್ಲದೆ ಇಂಬಳಪಾದರೂ ಮಕ್ಕಳನ್ನಗಲಿ ಎಂದೂ ಇದ್ದುದಿಲ್ಲವಲ್ಲ! ತಾಯ್ತನವೊಂದು ಸೌಭಾಗ್ಯಕ್ಕಿಂತ ಹೆಚ್ಚಿನ ರಕ್ಷೆಯಲ್ಲವೆ? ನಾನು ಈಗ ಸ್ಥಳ ಬದಲಿಸಲೂ ವಿವಂಚನೆಗೊಳಗಾಗಿದ್ದೇನೆ. ಇಷ್ಟಲ್ಲಿ ಇರಲೂ ಈ ಪರಿ ಚಿಂತಾಕುಲನಾಗಿದ್ದೇನೆ. ಅವಳಿಗೂ ಬೇರೆ ಸ್ಥಳಕ್ಕೆ ಬದಲಿಸಲು ಸಾಧ್ಯವಿತ್ತು. ಆದರೆ ಅವಳು ಯಾವ ಯೋಚನೆಯೂ ಇಲ್ಲದೆ ನಿದ್ರಿಸಿದ್ದಾಳೆ ಮುಖ ಕಾಣುತ್ತಿಲ್ಲ. ಕಾಣಬಹುದಾದರೂ ದಿಟ್ಟಿಸಿ ನೋಡಲಾರೆ ನಾನು. ಹಗಲು ಆಗಿದ್ದರೆ ಅವಳ ಮನಸ್ಸನ್ನು ಮುಖದಲ್ಲಿ ಓದಬಹುದಿತ್ತು ನಾನು. ನನ್ನ ಮನಸ್ಸನ್ನು ಅವಳು ಓದಲಾರಳೇನು? ಹೆಣ್ಣು ಗಂಡಿನ ಮನಸ್ಸಿನ ಸ್ವರೂಪವನ್ನು ಸಹಜವಾಗಿ ಬಲ್ಲಳಂತೆ! ಮನಸ್ಸಿನ ವಿಕಾರವನ್ನು ಯಾವ ಸೂಕ್ಷ್ಮಗ್ರಾಹಿಯೂ ಮುಖದಲ್ಲಿ ಗುರುತಿಸಬಲ್ಲ. ನಾನು ವಿಕಾರ ವಶನಾಗಿದ್ದೇನೆಯೇ? ಲಂಪಟನಾಗಿದ್ದೇನೆಯೆ? ನಿರ್ಲಿಪ್ತನಾದರೂ ಅಲ್ಲ— ಇದ್ದಿದ್ದರೆ ದಣಿದ ದೇಹಕ್ಕೆ ಎಚ್ಚರದ ಈ ಶಿಕ್ಷೆಯನ್ನು ನಾನು ಖಂಡಿತ ವಿಧಿಸುತ್ತಿದ್ದಿಲ್ಲ.

*   *   *   *

ತಪ್ಪನ್ನೂ ಮಾಡಲಿಕ್ಕಿಲ್ಲದ ನನಗೆ ಈ ಶಿಕ್ಷೆಯೇ? ಜಗತ್ತಿನಲ್ಲಿ ಸತ್ಯದ ಕೊಲೆಯಾಗಿದೆ! ನೀತಿಮತ್ತೆಯು ಕೊಲೆಯಾಗಿದೆ!

"ಎರಡನೆಯ ವರ್ಗದ ಡಬ್ಬಿಯಲ್ಲಿ ಸ್ತ್ರೀಯೊಬ್ಬಳ ಕೊಲೆ" ಎಂದು ಕೂಗುತ್ತಿದ್ದಾರೆ--ಹುಡುಗರು. ಇದೇ ನಮ್ಮ ಡಬ್ಬಿಯ ಸಮಾಚಾರವೇ ಇದು? ಮತ್ತೆ ಯಾರಾದರೂ ಒಂದು ಸೇರಿಕೊಂಡಿದ್ದಾರು. ಇದು ಅವರ ಕೆಲಸವಾಗಿದ್ದೀತು. ನನಗೇನು ಸಂಬಂಧ ಇದೆಲ್ಲಾ— ಛೀ!

* * * *

ಎಚ್ಚರಾಯಿತು! ನೋಡುತ್ತೇನೆ—ಎಲ್ಲಾ ಕನಸು! ಎದುರು ಬೆಂಚಿನ ಮೇಲೆ ಯಾರೂ ಇಲ್ಲ. ಅಲ್ಲಿ ಒಬ್ಬಳು ಇದ್ದಳೋ ಅದು ಕನಸೋ ಎಂದು ತಲೆ ತುರಿಸಿಕೊಂಡೆ. ಒಂದು ಬಾಡಿದ ಹೂಮಾಲೆ ಬಿದ್ದಿದೆ ಅಲ್ಲಿ. ಹೌದು; ಅವಳು ಇಲ್ಲಿ ಇದ್ದಳು. ಹಿಂದಿನ ಯಾವುದೋ ಸ್ಟೇಶನ್ನಿನಲ್ಲಿ ಇಳಿದಿರಬೇಕು. ಬದುಕಿದೆ! ರಾಘವೇಂದ್ರ ಗುರುವೇ—ನಿನ್ನ ಪುಣ್ಯ ಪ್ರಭಾವ! ಅವಳ ಇಳಿಯದಿದ್ದು, ನಾನು, ಒಬ್ಬಳೇ ಇರುವ ಅವಳೊಡನೆ ಪ್ರವಾಸ ಮಾಡುತ್ತಿದ್ದುದನ್ನು ನನ್ನ ಪರಿಚಿತರು—ಗಾಡಿ ನಮ್ಮ ಒಂದು ಜಿಲ್ಲೆಯಲ್ಲಿ ಓಡುತ್ತಿತ್ತು— ನೋಡಿದ್ದರೆ! ಹುಬ್ಬಳ್ಳಿಯಲ್ಲಿಳಿಯುವಾಗ ನನ್ನ ಸೌಭಾಗ್ಯವೇ ಕಾಡಿದ್ದರೆ! ನಾನು ದ್ರೋಹಿಯೆಂದವಳು ಗ್ರಹಿಸಿದ್ದರೆ—ಎಲ್ಲಾ 'ರೆ' ರಾಜ್ಯದಿಂದ ಪಾರಾದೆ.

ಈ ಕರಾಳ ನೆನಪೊಂದನಳಿಸು ಗುರುವೇ! ನಾನು ದ್ರೋಹಿಯೇ? ಅಲ್ಲವಾದರೆ ನನ್ನನ್ನು ಇಂಥ ದುರ್ವಿಚಾರಗಳಿಗೆಲ್ಲ ಯಾಕೆ ಒಳಗೊಟ್ಟೆ ನೀನು?

* * * *

ಬೆಳಗಾವಿ ಬಂತು ಆ "ಸ್ಥಳದ ಮಹಿಮೆ" ಯಿಂದಬೇಕೆಂದೇ ಕಾಯ್ದಿರಿಸಿದ ಸ್ಥಳ ಬಿಟ್ಟು ಬೇರೆಯೊಂದು ಜನಸಮ್ಮರ್ದದ ಡಬ್ಬಿಗೆ ಹೋದೆ

* * * *

ನಾನು ನನ್ನ 'ಎತ್ತರ'ದಲ್ಲಿಯೇ ಹುಬ್ಬಳ್ಳಿಯಲ್ಲಿಳಿದೆ. ಮರುದಿನ ಸ್ಥಳೀಯ ಪತ್ರಿಕೆಯಲ್ಲಿ "ಶ್ರೀ....ಇವರು....ವಿಚಾರಣಾ ಮಂಡಳಿಯ ಸಭೆ ಮುಗಿಸಿಕೊಂಡು ಇಂದು ಮೇಲ್ ಗಾಡಿಯಿಂದ ಮರಳುತ್ತಾರೆ" ಎಂದು ಸುದ್ದಿ ಇತ್ತು.

# ಭಟ್ಟರ ಮದುವೆ

ನಾನೊಮ್ಮೆ ನನ್ನ ಸ್ನೇಹಿತನ ಊರಿಗೆ ಹೋಗಿದ್ದೆ. ಅಂದು ಅವರ ಮನೆಯಲ್ಲಿ ಸತ್ಯನಾರಾಯಣ ಪೂಜೆ. ನಾನು ಹೋದಾಗ ಪೂಜೆಯ ಎಲ್ಲ ವಿಧಾನಗಳು ಮುಗಿದು ಪ್ರಸಾದ ಹಂಚುವ ಕೆಲಸ ನಡೆದಿತ್ತು. ನಾನು ಹೋಗುತ್ತಲೇ ಕೈಕಾಲು ತೊಳೆದು ಪೂಜಾಮಂಟಪದ ಕಡೆಗೆ ತೆರಳಿದೆ. ದಾರಿಯಲ್ಲಿಯೇ ಕಾಗೆಗಪ್ಪು ಬಣ್ಣದ ಅರ್ಧವಯಸ್ಸಾದ ತರುಣ ಭಟ್ಟರೊಬ್ಬರು ಚಿತ್ರ ವಿಚಿತ್ರವಾಗಿ ಗಂಧ-ಕುಂಕುಮ ಭೂಷಿತರಾಗಿ ಕಾಣಿಸಿಕೊಂಡರು. ನಾನು ದೂರಿಂದಲೇ ಸತ್ಯನಾರಾಯಣನಿಗೆ ಕೈಮುಗಿದು ಗೆಳೆಯನೊಡನೆ ಹಿಂತಿರುಗುತ್ತಿದ್ದೆ. ಕೈಗೂಡ ಬರುವ ನಾಯಿಕುನ್ನಿಯಂತೆ ಭಟ್ಟರ ಸವಾರಿ ನನ್ನ ಬೆನ್ನಹತ್ತಿತು. ನಾವು ಒಂದು ಕಿರುಮನೆಗೆ ಬಂದು ಕುಳಿತುಕೊಂಡೆವು. ನನ್ನ ಗೆಳೆಯ ಗೋಪು ಆ ಭಟ್ಟರನ್ನು ಪ್ರಸಾದ ತರುವಂತೆ ಹೇಳಿ ಕಳಿಸಿದ. ಅವರು ಅತ್ತ ಹೋಗುತ್ತಲೇ ನಾನು 'ಇದೆಲ್ಲಿಯ ಪ್ರಾಣಿ ಮಾರಾಯ' ಎಂದೆ. 'ಇವನೊಬ್ಬ ಮದುವೆಯಾಗದ ವಿಧುರ' ಎಂದು ನಗುತ್ತ ಹೇಳಿದ ಗೋಪು. 'ಹಾಗಾದರೆ ಇನ್ನೊಂದು ಮದುವೆ ಮಾಡೋಣ' ಎಂದ. ನಾನೆಂದೆ. 'ಅವನು ಅದಕ್ಕಾಗಿಯೇ ಈಗ ನಿನ್ನನ್ನು ಬೆನ್ನು ಹತ್ತಿರುವನು." ಎಂದ ಗೋಪು

ಈ ಸಲ ಬರುವಾಗ ಭಟ್ಟರು ಮತ್ತೆ ಬೇರೆ ವಸ್ತ್ರಗಳಿಂದ ಭೂಷಿತರಾಗಿ ಬಂದರು. ಎಂದಿನಿಂದಲೂ ಹೊಸದಾಗಿ ಉಳಿದ, ನೀರುಕಾಣದ, ಹೊಲಸಾದ ಇವಿ.ಟೇಶನ್ ಸಿಲ್ಕಿನ ಪೀತಾಂಬರ (ಮಡಿ) ಉಟ್ಟು, ಅಷ್ಟೇ ಚೆನ್ನಾಗಿರುವ ಬಣ್ಣ ಬೆರಸಿದ ಬಿಳಿ ಉತ್ತರೀಯ ಹೊದ್ದುಕೊಂಡಿದ್ದರು. ಹಣೆಗೆ ಈ ಸಲ ಮತ್ತೂ ಭವ್ಯವಾದ ಅಲಂಕಾರ! ಆಗಾಗ ಬಿರುನಗೆ ಬೇರೆ. ಮೇಲಿನ ಸಾಲಿನಲ್ಲಿ ಮೂರು ಹಲ್ಲು ಕಪ್ಪೆಯಾಗಿವೆ. ಕೆಳಸಾಲಿನಲ್ಲಿ ಎರಡು ಹುಳದಿಂದ ಪೋಷಿಸಲ್ಪಟ್ಟ ಹಲ್ಲುಗಳು ಶೋಭಿಸುತ್ತಿವೆ. ಒಂದೇ ಒಂದು ತಿಂಗಳಿನ ಕ್ಷೌರ

ಮುಖದ ಮೇಲೆ. ಅಷ್ಟೇ ದಿವಸಗಳ ಕೂದಲುಗಳಿಂದ ಅದೆಷ್ಟೋ ದಿವಸ ಗಳಿಂದ ಬೆಳೆದು ಬರುತ್ತಿರುವ ಜಾಡಿಕೆಗಳೊಡನೆ ತಲೆ. ಹೊದಿಕೆಯು [illegible] ನಿಂದ ಮುಕ್ಕಾಲು ಪಾಲು ಮುಚ್ಚಿದೆ. ಬಂದರು ಭಟ್ಟರು—ಏಕಪ್ರಕಾರ ವಾಗಿ ಹೆಜ್ಜೆ ಹಾಕುತ್ತ, ಬಾಯಿ ಮುಚ್ಚಿದೊಡನೆ ನಗುವ ನೆಪವಾಗಿ ನಗುತ್ತ. ನಿಮಿಷಕ್ಕೊಮ್ಮೆ ಉಟ್ಟ ಬಟ್ಟೆ ಎಳೆಯುತ್ತ. ತಲೆಯ ಸೆರಗು [illegible] ಕೈಯಲ್ಲಿ ಪ್ರಸಾದವೂ ಇತ್ತು. ನನಗೆ ಕೊಟ್ಟ ಭಾಗ ದೊಡ್ಡದು. ಎಂದರೆ ಗೋಪುನಿಗೆ ದೊರೆತುದರ ಮೂರರಷ್ಟು. ಅದೇನು [illegible] ನನ್ನ ಮೇಲವರಿಗೆ. ಗೋಪು ಕೇಳಿದ: "ಇವರ ಊರು ಯಾವುದು ಗೊತ್ತೇ ಭಟ್ರೇ ?" ಭಟ್ಟರು ಒಡನುಡಿದರು: "ಬೊಂಬಾಯಿ ಇರಬೇಕು."

"ಏನು, ಬಂದವರೆಲ್ಲ ಬೊಂಬಾಯಿಯವರೆ ಏನು ನಿಮ್ಮ ಪಾಲಿಗೆ? ನಿಮಗೆ ಮುಂಚೆ ಹೆಣ್ಣು ಬೇಕಾದ ಮಾತ್ರಕ್ಕೆ ಬರುವವರೆಲ್ಲ ಬೊಂಬೈಯಿಂದಲೇ ಬರಬೇಕೆ ?"

"ನನಗೆ ಬೊಂಬಾಯಿ ಹೆಸ್ರೊಂದೇ ಇಲ್ಲಿ. ಯಾವೂರಾದರೂ ಆದೀತು."

"ಆದರೆ 'ಹೆಣ್ಣು' ಇರಬೇಕಲ್ಲವೇ–ಅದು ?"

"ಹೆ–ಹೆ–ಹೆ–ಹೆ–ಹೆ—ಹೌದು."

ನನಗೆ ಇನ್ನು ಸುಮ್ಮನೆ ಕುಳಿತು ಪ್ರಯೋಜನವಿಲ್ಲವೆನಿಸಿತು

"ನಿಮಗೆ ಎಷ್ಟು ವಯಸ್ಸು ಭಟ್ಟರೆ ?"

"ಈ ಯುಗಾದಿಗೆ ಇನ್ನೂ ಮೂವತ್ತೆಂಟು ತುಂಬುತ್ತದೆ."

"ಹಾಗಾದರೆ ಇನ್ನೂ ಮದುವೆಯ ಪ್ರಾಯವಿದೆಯೆನ್ನಿ."

"ಹೋ–ಹೌದು. ನನಗಿನ್ನೂ ಮದುವೆಯೇ ಆಗಿಲ್ಲ ಮತ್ತೆ. ಪ್ರಾಯ ಕಳೆಯುವದೆಲ್ಲಿ ಬಂತು ?"

"ನಿಮಗೆ ಉತ್ಪನ್ನವೆಷ್ಟು ಭಟ್ಟರೇ ?"

"ನಾಲ್ವತ್ತು ಮುಡಿ ಭತ್ತ ಬರುತ್ತದೆ."

"ಎಷ್ಟು ವರ್ಷಕ್ಕೆ ?" ಗೋಪು ಕೇಳಿದ.

"ಒಂದೇ ಒಂದು ವರುಷಕ್ಕೆ. ಒಮ್ಮೊಮ್ಮೆ ಹೆಚ್ಚು ಬರುತ್ತದೆ."

"ಒಪ್ಪೊತ್ತು ಇರುವುದೂ ಇಲ್ಲ"

"ಅದೂ ಉಂಟು. ಹೆ-ಹೊ-ಹೊ—"

"ಹಾಗಾದರೆ ಹೆಣ್ಣು ಕೊಡಲು ಅಡ್ಡಿ ಇಲ್ಲ—" ನಾನೆಂದೆ. ಭಟ್ಟರು ಒಮ್ಮೆ ಗಂಭೀರ ನಗೆ ನಕ್ಕು ಸರಿದು ಕುಳಿತರು. ನಾನು ಹೆಣ್ಣಿನ ವರ್ಣನೆ ಆರಂಭಿಸಿದೆ.

"ಭಟ್ಟರೇ, ಹೆಣ್ಣು ನಿಮಗಿಂತ ಸ್ವಲ್ಪ ಕೆಂಪು ಜಾಸ್ತಿ. ಕಣ್ಣು ಮೂಗು ನಿಮಗಿಂತ ಚೆನ್ನಾಗಿವೆ. ಮುಖ ದುಂಡಗಾಗಿ ಸುಂದರವಾಗಿದೆ. ನಿಮಗಿಂತ ಸ್ವಲ್ಪ ಎತ್ತರವಾಗಿದ್ದಾಳೆ. ದಪ್ಪ ಮಾತ್ರ ನಿಮ್ಮಷ್ಟೇ. ಅಂತೂ ನಿಮಗೆ ತಕ್ಕ ಕನ್ಯೆ."

"ವಯಸ್ಸು ಸ್ವಾಮೀ?"—ಭಟ್ಟರು ಆತುರದಿಂದ ಕೇಳಿದರು.

"ನಿಮಗಿಂತ ಬಹಳ ಚಿಕ್ಕವಳು"—ನಾನೆಂದೆ.

"ಎಷ್ಟು ವಯಸ್ಸಾದರೇನು ಭಟ್ಟರೇ"—ಗೋಪ್ರೂ ಕೇಳಿದ.

"ಎಷ್ಟಾದರೂ ಆದೀತು" ಭಟ್ಟರು [illegible] ತಪ್ಪಿ ಹೇಳಿಬಿಟ್ಟರು. ಇಷ್ಟರಲ್ಲಿ ಊಟಕ್ಕೇಳಬೇಕಾಯಿತು.

ಇನ್ನೇನು— ಭಟ್ಟರ ಕಲ್ಯಾಣೋತ್ಸವಕ್ಕೆ ಅಣಿಮಾಡುವುದ[illegible]ಯಿತು. ಒಬ್ಬ ಲಕ್ಷಣವಾದ ಹುಡುಗಿಯೂ ಅಣಿಯಾದಳು. ಹೆಣ್ಣಿನ ಅಣ್ಣನ ಪಾತ್ರ ನನ್ನದು. ಬೊಂಬಾಯಿಂದ ಬಂದ ನಾನೇ ತಾನೇ ಹೆಣ್ಣು ಕೊಡುವುದು ಭಟ್ಟರಿಗೆ! ಇಷ್ಟು ಲಕ್ಷಣವಾದ ಈ 'ಹುಡುಗಿ'ಗೆ ಒಬ್ಬ ಲಕ್ಷಣವಾದ ವರ ಸಿಕ್ಕಲಿಲ್ಲವಲ್ಲ—ಎಂದು ಕಳವಳವಾಯಿತು. ನಾನು ಅದನ್ನು [illegible] ತೋರಿಸುವಾಗ 'ವರ'ದ ಕಡೆಯ ಗೋಪ್ರೂ—"ಮಾತು ಹೋಗಿದೆ ಇನ್ನು ಮೀನ-ಮೇಷ ಎಣಿಸಿದರೆ ಆಗುತ್ತದೆಯೇನು? ಮೊದಲೇ ಇದನ್ನು ನಿರುಕಿಸಿ ನೋಡಬೇಕಾಗಿತ್ತು- ನಮ್ಮ [illegible]" ಎಂದು ಗದರಿಸಿದ. "ಇನ್ನೇನು ಮಾಡುವುದು. ಮಾತು ಹೋಗಿದೆ" ಎಂದು ನಾನೂ ಒಪ್ಪಿದೆ. ಹೆಣ್ಣು ಒಪ್ಪಿಸುವಾಗ, ಅದರಲ್ಲಿಯೂ ಇಂಥ ವ್ಯಕ್ತಿಗೆ ಒಪ್ಪಿಸುವಾಗ ಕನ್ನೆಯ ಕಡೆಯವರಿಗೆಷ್ಟು ಕಳವಳವಾಗಬೇಕೋ ಅಷ್ಟು ಕಳವಳ

ಭಾವನೆ ಒಮ್ಮೆ ಮಿಂಚಿತು ನನ್ನ ಮನಸ್ಸಿನಲ್ಲಿ. ಗಂಗಾಧರಭಟ್ಟರಿಗೆ ಮನೆಯುವರು—ಬಳಗದವರು ಎಲ್ಲ ಗೋಪ್ರೋನೇ. "ಆಟದ ಮದುವೆ" ಒಂದೇ ದಿನದಲ್ಲಿ ಆಗ ಬೇಕಾದುದರಿಂದ ಸನಾತನೀ ಭಟ್ಟರಿಗೆ ಗಾಂಧರ್ವ ವಿವಾಹದ ಘೋಷಣೆಯುಕ್ತಿತ್ತು ಒಪ್ಪಿಸಿದೆವು. ಹೆಣ್ಣು ಇಲ್ಲವೆ ಹೆಣ್ಣಿನಂತಹ ಒಂದು ಪ್ರಾಣಿ ಆದರೆ—ಯಾವುದಕ್ಕೂ ಒಪ್ಪುವಷ್ಟು ವಿವಾಹ ತೃಷೆ ಅವರದು ! ಅವರು ತಮ್ಮ ಮನೆಗೆ ಹೋಗಿ ತಮ್ಮ ಹಿರಿಯರ ವೇಷಭೂಷಣಗಳಿಂದ ಅಲಂಕೃತರಾಗಿ ಬಂದರು. ಕಿವಿಗೆ ಕಡಗ ಹಾಕಿದರು ಮೈಗೆ 'ವೀರರಾಜ' ನ ಕಾಲದ ಜರತಾರಿ ಅಂಗಿ ಹಾಕಿ ನಡಕಟ್ಟು ಕಟ್ಟಿದರು. ತಲೆಗೆ (ಪಾಪ!) ಪೋಲೀಸರ ಪೇಟ ಇಟ್ಟುಕೊಂಡಿದ್ದರು.

ನಾನು ಇದೇಕೆ ಎಂದು ಕೇಳಿದುದಕ್ಕೆ "ನಮ್ಮ ಮೊದಲಿನ ಹಿರಿಯರು 'ವೀರರಾಜ' ಅರಸನ ಕಾಲಕ್ಕೆ ರಾಜಪುರೋಹಿತರಾಗಿದ್ದರು. ಇತ್ತೀಚಿನ ನಮ್ಮ ಹಿರಿಯರು ಮಾತ್ರ ಪೋಲೀಸರಾಗಿದ್ದರು. ಹಿರಿಯರ ನೆನಪಿಗೆಂದು ಎಲ್ಲವನ್ನೂ ಕಾದಿರಿಸಿದ್ದೇನೆ ನಾನು. ಅವುಗಳ ಮೇಲೆ ನನಗೆ ಬಹಳ ಅಭಿಮಾನ"—ಎಂದು ಉಸುರಿದರು ಮದುವಣಿಗ ಭಟ್ಟರು. ಮರಿ ಇದನ್ನು ನೋಡಿ ಸಹಿಸದೇ ದುಡುಕಿ ಬಂದು ಹೊಸ ಕಾಲದ ಒಂದು ಉಪನ್ಯಾಸವಿತ್ತು ಭಟ್ಟರ ತಲೆಯ ಪೋಲೀಸಪೇಟ ತೆಗೆದು ಗೋಪ್ರೊನ ಹಳೆಯ ಹ್ಯಾಟ್ ಇಟ್ಟ. ಭಟ್ಟರು 'ಪುರುಷ ಸರಸ್ವತಿ' ಯಂತೆ ಶೋಭಿಸಿದರು.

ನಾನು ನನ್ನ 'ಹಿರಿತನ'ದ ಮಾತು ಮುಂದುವರಿಸಿದೆ— "ಗಾಂಧರ್ವ ವಿವಾಹದಲ್ಲಿ ಗಂಡು ಮುಖ್ಯ. ಅದು ಗಂಡಾಗಿಯೇ ಉಳಿಯಬೇಕು. ಹೆಣ್ಣಿನವರು ತಮ್ಮಲ್ಲಿದ್ದಂಥ ಒಂದು ಹೆಣ್ಣನ್ನು ತಂದು ವರನಿಗೆ ಒಪ್ಪಿಸಿದರಾಯಿತು. ಹೆಣ್ಣು ಒಪ್ಪಿಸಿಕೊಳ್ಳುವಾಗ 'ವರ' ತನ್ನ ಪ್ರೀತಿಯ ಗುರುತೆಂದೂ ಮೊದಲ ಕಾಣಿಕೆಯೆಂದೂ ಕನ್ನೆಗೆ ಉಡುಗೊರೆಕೊಡಬೇಕು ಈಗಿನ ಕಾಲದಲ್ಲಿ ಹೆಣ್ಣಿನ ಸ್ವಾತಂತ್ರ್ಯದ ಗಾಳಿ ಬೀಸುತ್ತಿರುವುದರಿಂದ ಒಡವೆ ವಸ್ತುಗಳು ಹೆಣ್ಣಿನ ಮನಸ್ಸಿಗೆ ಒಪ್ಪುವಂಥವು ಇರಬೇಕು. ಹೆಣ್ಣಿನ ಮನವರಿತು ಒಡವೆ ಕೊಡಬೇಕು. ಆ ಶಕ್ತಿ ಇಲ್ಲವಾದಲ್ಲಿ ೫೦ ರೂ. ಗೆ ಕಡಿಮೆ ಇಲ್ಲವಾದಷ್ಟು ಹಣವನ್ನು ವೀಳ್ಯದೊಡನೆ ಕನ್ನೆಯ ಬಲ ಕೈಗಿತ್ತು ಎಡ ಕೈ

ಹಿಡಿಯಬೇಕು. ಇದು ಕನ್ನೆಗೆ ಸಂಬಂಧಪಟ್ಟದ್ದಾಯಿತು. ಇನ್ನು ಬಳಗದವರ ವಿಚಾರ:

“ಇಷ್ಟು ದಿನ ಬೆಳಸಿ ದೊಡ್ಡವಳನ್ನಾಗಿ ಮಾಡಿ ನಿಮ್ಮಂತಹ “ಪುರುಷ ಸರಸ್ವತಿ” ಗಳಿಗೆ ಸರಿಯಾಗುವಂತೆ ಮನಸ್ಸನ್ನೂ ಮಿದುಮಾಡಿ ಒಪ್ಪಿಸಿದ ಕನ್ನೆಯ ಹಿರಿಯರಿಗೆ ತಕ್ಕ ಸತ್ಕಾರ ಮಾಡಬೇಕು. ಇದಕ್ಕೆ ೫೦ ರೂ. ವೆಚ್ಚ ಗೊಳಿಸಬೇಕಾಗುವುದು. ಇನ್ನು ಮದುವೆಗೆ ಬಂದ ಜನರೆಲ್ಲ ನಿಮ್ಮ ಯೋಗ್ಯತೆಗನುಸಾರ. ಬಂದವರ ಯೋಗ್ಯತೆ ಕಡಿಮೆಯಾಗದಂತೆ ಸತ್ಕರಿಸುವುದು. ಇಷ್ಟು ವೆಚ್ಚವಾದಲ್ಲಿ ಒಂದು ಮದುವೆಯಾಗುತ್ತದೆ........” ನಾನು ನನ್ನ ಚಿಕ್ಕ ಭಾಷಣವನ್ನು ಮುಗಿಸಿದೆ.

ಭಟ್ಟರ ಮುಖ ದುಡ್ಡು ವೆಚ್ಚ ಮಾಡಬೇಕಾಯಿತಲ್ಲಾ ಎಂದು ಕಪ್ಪಿಟ್ಟಿತು. ಭಟ್ಟರು ಏನಾದರೂ—ತಮಗೆ ಏನೂ ತಿಳಿಯದಿದ್ದರೂ ಯಾವುದಕ್ಕೂ ಒಂದು ಕಾಸು ವೆಚ್ಚ ಮಾಡಬಾರದೆಂಬುದನ್ನು ಮಾತ್ರ ತಿಳಿದವರು. ಭಟ್ಟರು ಮಾತನಾಡದಾದರು. ಹಾಗೇ ದೃಷ್ಟಿಬೊಂಬೆಯಂತೆ ನಿಂತರು. “ನಮ್ಮ ಹುಡುಗಿಗೆ ಇಂಥ ಜೀನ-ಹಸಕ ವರನಾದರೆ ಬೇಡ” ಎಂದು ನಾನೆಂದೆ. ಗೋಪಾಲನ ಮೇಲೆ ಭಟ್ಟರಿಗೆ ವಿಶ್ವಾಸ. “ನಿಮ್ಮ ಹುಡುಗಿಯನ್ನು ನೋಡಿದರೆ ಭಟ್ಟರು ಎಷ್ಟಾದರೂ ವೆಚ್ಚಮಾಡಬಹುದು. ಭಟ್ಟರೇಕೆ, ಯಾರ ಬಾಯಲ್ಲಿಯೂ ನೀರು ಬಂದೀತು. ಭಟ್ಟರು ಇನ್ನೂ ಹುಡುಗಿಯನ್ನು ನೋಡದೆ ಹಿಂದು-ಮುಂದು ನೋಡುತ್ತಾರೆ.” ಎಂದನು.

ಇದನ್ನು ಕೇಳುತ್ತ ನಿಂತ ಮರಿ “ಹುಡುಗಿ” ಯನ್ನು ಕರೆದುಕೊಂಡು ನಮ್ಮ ಮುಂದೆ ಹಾದು ಆಚೆಗೆ ಹೋದ. ಭಟ್ಟರು ನೋಡಿದರು. ಎದೆತುಂಬಿ ಬಂದಿರಬೇಕು ಅವರಿಗೆ. ಒಂದು ನಗೆ ಅರಳಿ ಉರುಳಿತು.

“ನಮ್ಮ ಹುಡುಗಿಯನ್ನು ಕರೆದುಕೊಂಡು ಹೋಗುತ್ತೇವೆ”—ನಾನೆಂದೆ. “ಭಟ್ಟರೇ ಇನ್ನು ನಿಮ್ಮ ಮದುವೆಗೆ ನಾವು ಪ್ರಯತ್ನಿಸುವುದಿಲ್ಲ. ಇನ್ನು ನೀವು ಹೆಣ್ಣು ಕಾಣುವುದೇ ಸಾಧ್ಯವಿಲ್ಲ. ಕಾಸು ಖರ್ಚು ಮಾಡದ ನೀವು ಸಂಸಾರ ಹೇಗೆ ಸಾಗಿಸುತ್ತೀರಿ?” ಎಂದು ಗದರಿಸಿದ ಗೋಪು. ಭಟ್ಟರು ಗಾಬರಿಯಾಗಿ ಅವನನ್ನು ಒಂದೆಡೆಗೆ ಕರೆದುಕೊಂಡು ಹೋದರು.

ತವರು ತಿರುಗಿ ಬರುವಾಗ ಒಂದು ಗಂಟೆಯಾಯಿತು. ನಾವು ದಾರೀ ಕಾಯುತ್ತ ಚಹಾ ಸುರಿಯುತ್ತಿದ್ದೆವು. ಬಂದವನೇ ಗೋಪಾಲ “ಕೆಲಸ ಮುಂದರಿಯಲಿ” ಎಂದ “ದುಡ್ಡು ಎಲ್ಲಿ?”—ನಾನೆಂದೆ. “ನಾನು ಹೊಣೆ” ಎಂದ ಗೋಪ್ಪೂ. “ಹೊಣೆ ಗಿಣೆ ಏನೂ ಇಲ್ಲ. ಕಾಲಕ್ಕೆ ಸರಿಯಾಗಿ ಸಲ್ಲುವುದು ಸಲ್ಲಬೇಕು!” ನಾನೆಂದೆ ಜೇಬಿನಿಂದ ಹಣದ ಚೀಲ ತೆಗೆದು ತೋರಿಸಿದ ಗೋಪಾಲ. ಹತ್ತಿರಿದ್ದ ಭಟ್ಟರು ಉಶ್ ಎಂದು ಬೆವರು ಒರೆಸಿಕೊಂಡರು. ಗೋಪಾಲ “ಧೈರ್ಯವಿರಲಿ ಭಟ್ಟರೆ” ಎಂದ. ಭಟ್ಟರು ತಮ್ಮ ಅಚ್ಚುಮೆಚ್ಚಿನ ಮಾತು—“ಆದೀತು” ಎಂದರು

ಸರಿ. ಮರಿ ಒಂದು ಹೂಮಾಲೆ ತಂದು ಭಟ್ಟರ ಕೈಯಲ್ಲಿತ್ತ. ಭಟ್ಟರು ತಾವೇ ಹಾಕಿ ಕೊಳ್ಳುತ್ತಿದ್ದರು. ಗೋಪಾಲ ತಡೆದು “ನೀವು ನಿಮ್ಮ ಹೆಂಡತಿಗೆ ಹಾಕುವುದು ಭಟ್ಟರೇ, ನಿಮಗೆ ಅವಳು ಹಾಕಬೇಕು” ಎಂದು ಗದರಿಸಿದ. “ಆದೀತು” ಎಂದರವರು. ಒಂದೆಡೆಗೆ ಗ್ರಾಮೋಫೋನ್ ಸಂಗೀತ ನಡೆದಿದೆ. ಇನ್ನೊಂದೆಡೆಗೆ ಹುಡುಗರು ಕೊಳಲು ಬಾರಿಸುತ್ತಿದ್ದಾರೆ. ಮನೆಯ ಜನಕ್ಕೆಲ್ಲ ಉತ್ಸಾಹವೇ ಉತ್ಸಾಹ. ಭಟ್ಟರು ಎಲ್ಲರಿಗೂ ಅಷ್ಟು ಅಚ್ಚುಮೆಚ್ಚಿನವರು.

ಕನ್ನೆ ಬಂದು ನಾಚಿದಂತೆ ಬಾಗಿನಿಂತಿದ್ದಳು. ಭಟ್ಟರು ನೋಡಲೆತ್ನಿಸಿದರು. ಗೋಪಾಲನ ಅದ್ಭುತ ಉಪನ್ಯಾಸವಾಯಿತು. ಎಲ್ಲರೂ ಚಪ್ಪಾಳೆ ತಟ್ಟುತ್ತಿರಲು ಗೋಧೂಳೀ ಶುಭಮುಹೂರ್ತದಲ್ಲಿ ಕನ್ನೆ ಭಟ್ಟರಿಗೆ ಮಾಲೆ ಹಾಕಿ ಅವರ ಕೈಕುಲುಕಿಸಲು ತನ್ನ ಕೈಚಾಚಿದಳು. ಭಟ್ಟರು ತಾವೂ ಮಾಲೆ ಹಾಕಿ ಸತ್ಯನಾರಾಯಣನಿಗೋ ಯಾವ ದೇವರಿಗೋ ಕೈಮುಗಿದು ಆಕಾಶ ನೋಡುತ್ತಿದ್ದರು. ಆಗ ಮರಿ ಬಂದು ಅವರ ಊರ್ಧ್ವದೃಷ್ಟಿಯನ್ನು ತಗ್ಗಿಸಿ ಅವರ ಕೈಯನ್ನು ಕನ್ನೆಯ ಕೈಗಿತ್ತನು. ಕನ್ನೆಯ ಒಂದೇ ಕೈಯನ್ನು ಭಟ್ಟರು ತಮ್ಮ ಎರಡೂ ಕೈಯಿಂದ ಮೃದುವಾಗಿ ಹಿಡಿದುಕೊಂಡು ‘ಆದೀತು’ ಎಂದರು. ಇತ್ತ ಗೋಪ್ಪೂ ಚಹಾ ಪಾರ್ಟಿ ನಡೆಸಿದ. ವಧೂವರರನ್ನು ಉಚ್ಚಸ್ಥಾನದಲ್ಲಿ ಎದುರು ಬದರು ಕೂರಿಸಲಾಯಿತು. ಇನ್ನು ಉರುಟಣೆಯ ಸಮಾರಂಭ ಜರುಗಬೇಕು. ಮೊದಲು ಹೊಸಪದ್ಧತಿಯಂತೆ ಕನ್ನೆಗೆ ನಾಮಕರಣವಾಗಬೇಕು. ಗೋಪಾಲನ ಹೇಳಿಕೆಯಂತೆ ಕನ್ನೆಗೆ

'ಮನೋಹಾರಿಣಿ' ಎಂದು ಹೆಸರು ಇಡುವದೆಂದು ಗೊತ್ತಾಯಿತು. ಭಟ್ಟರಿಗೆ ಉತ್ಸಾಹ ಉಕ್ಕಿ ಬರುವಾಗ ಉಚ್ಚಕಂಠದಿಂದ "ಮನೋಹಾರಿಣಿ" ಎಂದು ಹೆಸರು ಹೇಳಿದರು. ಅವರು ಹೇಳಿದ ರೀತಿ ಭಾವಪೂರ್ಣವಾಗಿತ್ತು.

ಕನ್ನೆಯ ಹಿಂದೆ ನಿಂತ ಮರಿ ಕನ್ನೆಯನ್ನು ಎಬ್ಬಿಸಿ ಒಂದು ಒಗಟಿ ಹಾಕಿ ಹೆಸರು ಹೇಳಲು ಕೇಳಿದ. ಗೋಪಾಲ ಹಾಡು ಹೇಳಿಸಬೇಕೆಂದು ಹಟ ತೊಟ್ಟ. ಕನ್ನೆ 'ಮನಮೋಹನಾ' ಹಾಡು ಹೇಳಿದಳು. ಭಟ್ಟರು ಮನೋ ಸಂಶಯದಿಂದ ಕನ್ನೆಯನ್ನು ದಿಟ್ಟಿಸುತ್ತಿರುವಾಗ ಮರಿ ಕನ್ನೆಯ ತಲೆಯ ಮೇಲಿನ ಸೆರಗು ಎಳೆದ.

ಭಟ್ಟರ ಬಾಯಿ ತಿಳಿಯದೇ "ತಿಮ್ಮಣ್ಣ" ಎಂದಿತು.

ನಗೆ-ಕೇಕೆ-ಚಪ್ಪಾಳೆಯ ಗದ್ದಲದಲ್ಲಿ ಭಟ್ಟರಿಗೆ ಕೊನೆಯ ತೆರೆ ಎಳೆದಂತಾಯಿತು.

# ಋಣಾನುಬಂಧ

ನಾನು ನನ್ನ ಕೆಲಸ ತೀರಿಸಿಕೊಂಡು ನಿಲ್ಮನೆಗೆ ಬಂದಾಗ ಗಂಟೆ ಎಂಟಾಗಿತ್ತು. ಕುದುರೆ ಗಾಡಿಗಳು ನಿಲ್ಮನೆಯಿಂದ ಸ್ವಲ್ಪ ದೂರ ನಿಲ್ಲಬೇಕೆಂಬ ಕಟ್ಟಳೆ ಇರುತ್ತದಷ್ಟೆ. ನನ್ನ ಒಂದು ಹಾಸಿಗೆ ಕಟ್ಟು, ಒಂದು ಭಾರವಾದ ಟ್ರಂಕು ಇವೆರಡನ್ನೂ ರೈಲು ನಿಲ್ಲುವ ಸ್ಥಳಕ್ಕೆ ಒಯ್ಯಬೇಕಾಗಿತ್ತು. ಅಲ್ಲಿ ಒಬ್ಬ ಕೂಲಿ ನಿಂತಿದ್ದ; ನಾಲ್ಕಾಣೆ ಬೇಡಿದ. ಒಂಬತ್ತು ಗಂಟೆಗೆ ಗಾಡಿ ಬರುತ್ತಿತ್ತು. ಇನ್ನೂ ಒಂದು ಗಂಟೆಯಿದೆ! ನಾನೇ ಹೇಗಾದರೂ ಇವುಗಳನ್ನು ಹೊತ್ತು ಇಳಿಸಿದರೆ. ನಾಲ್ಕಾಣೆ 'ಚಹಾಕ್ಕೆ' ಎಂದು ಅವನಿಗೆ ಬೇಡವೆಂದು ಹೇಳಿದೆ. ಅವನು ಅಲ್ಲಿಯೇ ನಿಂತಿದ್ದ. ಟ್ರಂಕನ್ನು ಕುದುರೆಗಾಡಿಯಿಂದ ಕೆಳಗಿಳಿಸಿ ಹಾಸಿಗೆ ಕಟ್ಟನ್ನು ಎತ್ತಿದೆ ಹಗುರಾಗಿತ್ತು. ಒಳ್ಳೇ ಠೀವಿಯಿಂದ ಎತ್ತಿ—ಕೂಲಿಯವನು ನಾಚುವಂತೆ—ಧಡಧಡನೆ ಹೋಗಿ ನಿಲ್ದಾಣದ ಒಂದು ಆಸನದ ಮೇಲಿಟ್ಟು ಟ್ರಂಕಿಗಾಗಿ ಬಂದೆ. ಹಿಡಿದು ಎತ್ತಿದರೆ ನನ್ನನ್ನೇ ನಾನು ಎತ್ತಿದಂತಾಯಿತು. ಒಳ್ಳೆ ದೃಢನಿಶ್ಚಯದಿಂದ, ಹುರುಪಿನಿಂದ,—ಅಷ್ಟೆ ಆಢ್ಯತೆಯಿಂದ—ಸಮೀಪದಲ್ಲಿ ಕೂಲಿ ನಿಂತಿದ್ದ—ಒಮ್ಮೆ ಮೇಲಕ್ಕೆತ್ತಿದೆ. ಆದರೆ ಸಾಗಲು ಬರಲೊಲ್ಲದು. ಒಂದಡಿ ಮುಂದಿಡಹೋದರೆ ಎರಡೂ ಕಾಲು ಒಮ್ಮೆಲೆ ಎಳೆದಂತಾಯಿತು. ಇದನ್ನು ನೋಡಿದವರು 'ಕುಣಿತ' ಎಂದಿರಬೇಕು. ಅಂತೂ ಹೀಗೆ ಕುಣಿಯುತ್ತ ನಿಲ್ಮನೆಯವರೆಗೆ ಹೋದೆ. ಈಗ ನಾಲ್ಕಾಣೆಯ ಆಸೆ ಉಳಿದಿದ್ದಿಲ್ಲ ನನಗೆ. ಆದರೆ ಕೂಲಿಯ ಮುಂದೆ ನನ್ನ ಶಕ್ತಿಪ್ರದರ್ಶನವಿತ್ತು. ನನ್ನ ಅಹಂಕಾರ ಹೆಡೆಯೆತ್ತಿ ನನ್ನನ್ನು ಬಾಗಿಸಿತ್ತು.

ಕೂಲಿಯವ ಅಲ್ಲಿಯೇ ನಿಂತಿದ್ದ. ನನಗೆ ಒಂದು ವಿಚಾರ ಹೊಳೆಯಿತು. 'ಕೂಲಿಯವನಾದರೂ ಮನುಷ್ಯ. ಟ್ರಂಕು ಹಗುರು ತಗಡಿನದು ನಿಜ; ಆದರೆ ಅದರಲ್ಲಿ ತುಂಬಿದ ವಸ್ತುಗಳು ಕಲ್ಲು—ಪಾಷಾಣ! ಅವನಿಗೂ ಅಷ್ಟೇ ಕಷ್ಟವಾಗುತ್ತಿತ್ತು. ಒಬ್ಬನ ಕಷ್ಟ ಉಳಿಸಿದೆ' ಎಂದು ಹೆಮ್ಮೆಪಡುವವನಿದ್ದೆ. ನಿಂತ ಆ ಕೂಲಿ ಘೊಕ್ಕೆಂದು ನಕ್ಕ. ಅವನು ನನ್ನನ್ನು 'ಇಂದು ನಿಮ್ಮ ಜೀವ

ಉಳಿಸಿದ್ದೀರಾ' ಎಂದು ಕೇಳಿದಂತಾಯಿತು ಸಿಟ್ಟು ಬಂತು. 'ಹೋಗೋ ಆಚೆಗೆ' ಎಂದೆ. ಅವನೆಲ್ಲಿ ಹೋಗಬೇಕು ? 'ಹೋಗುವವರು ನೀವು' ಎನ್ನುವಂತೆ ಹಾಗೇ ನಿಂತಿದ್ದ.

ನನ್ನಂಥವರು ದಿನಾ ಅದೆಷ್ಟೋ ಜನ ಬಂದು ಹೋಗುವದನ್ನು ಅವನು ಕಂಡಿದ್ದಾನೆ. ಋಣ ಇದ್ದಷ್ಟು ದುಡ್ಡು ದೊರೆಯುತ್ತದೆ ಅವನಿಗೆ. ನನ್ನಂಥವರಿಂದ ಅವನಿಗೆ ಪುಡಿಕಾಸು ದೊರೆಯುದಿದ್ದರೇನು? ನನ್ನ ಸಾಹಸ-ಬುದ್ಧಿಯೂ ಅವನಿಗೊಂದು ಪಾಠವೇ ಆಗಿದ್ದೀತು.

ಜವರು ಇಳಿಯುತ್ತಿತ್ತು. ಸಮಯ ನೋಡಿದರೆ ಗಾಡಿ ಬರಲು ಇನ್ನೂ ಇಪ್ಪತ್ತು ನಿಮಿಷ. ಟಿಕೇಟು ಸುರುವಾಗಿತ್ತು. ಸಾಲಿನಲ್ಲಿ ನಿಂತು ಒಂದನ್ನು ಕೊಂಡು ತಂದೆ. ಮತ್ತೊಂದು ಭಾರ ಇಳಿದಂತಾಯಿತು. ನಾನು ಕೊಟ್ಟ ಚಿಲ್ಲರೆಗಳಿಗಿಂತ ಟಿಕೇಟು ಹಗುರಾಗಿತ್ತು. ಒಂದು ದೊಡ್ಡ ಉಸಿರೆಳೆದು ನನ್ನ ಟ್ರಂಕಿನ ಮೇಲೆ ಕುಳಿತಿದ್ದೆ.

ಒಂದು ವಿಚಾರ: ಗಾಡಿಬಂದ ಮೇಲೆ ಇದನ್ನೆಲ್ಲ ಎತ್ತಿ ಒಯ್ಯುವದು ಅಸಾಧ್ಯ. ಮೇಲಾಗಿ ಸ್ಥಳವಿರುವ ಒಂದು ಡಬ್ಬಿ ನೋಡಬೇಕು; ಅದರ ಮಲಗಿ ಹೋಗಬಹುದು. ಈ ಪಟ್ಟಿಶ್ರಮ ಬೆಳಗಿನವರೆಗೂ ಆರಲಿ; ಪಡೆದ ಫಲ ಆವರೆಗೂ ಉಳಿದೀತು.

ಈಗಲೇ ಮತ್ತೆ ಟ್ರಂಕು ಹೊರಬೇಕು. ಗಾಡಿ ನಿಲ್ಲುವ ಸ್ಥಳದಲ್ಲಿ ಇಟ್ಟುಕೊಂಡು ಕೂತಿರಬೇಕು; ಅಂದರೆ ಸರಿ-ಎಂದು ಮತ್ತೆ ಹೊತ್ತೆ. ಹಳಿಯ ಮೇಲಿನ ಕಟ್ಟೆಯ ತುದಿಗೇ ಟ್ರಂಕು ಇಟ್ಟು ಅಲ್ಲಿಯೇ ಕುಳಿತೆ. ಈ ಎರಡನೆಯ ಸಲ ಹೊತ್ತ ಶ್ರಮದಿಂದ ನನಗೆ ಖಾಲಿ ಡಬ್ಬಿ ನೋಡುವ ಆಸೆ ಉಳಿಯಲಿಲ್ಲ. ಮತ್ತೆ ಬರಿ ಡಬ್ಬಿಯವರೆಗೆ ಇದನ್ನು ಹೊರಬೇಕಲ್ಲ ! ಟ್ರಂಕು ಇಟ್ಟಸ್ಥಳಕ್ಕೆ ಯಾವ ಡಬ್ಬಿಯ ಬಾಗಿಲು ಬರುವದೋ ಅದನ್ನೇ ಹತ್ತುವದು-ಅದು ೨ನೆಯ ಕ್ಲಾಸಿನ ಡಬ್ಬಿಯಾದರೆ ಟಿಕೇಟು ಬದಲಿಸುವದು ಎಂದು ನಿರ್ಧರಿಸಿದೆ.

ಚಕ್ ಎಂದು ಬೆಳಕು ಬಿತ್ತು. ಗಾಡಿ ಬರುತ್ತಿತ್ತು.

ಗಾಡಿ ಬಂದೇ ಬಿಟ್ಟಿತು. ನಾನು ಸ್ವಲ್ಪ ಹಿಂದೆ ಸರಿದು. ಬರಿ ಡಬ್ಬಿ ನೋಡುತ್ತಿದ್ದೆ. ನನ್ನ ತಪಸ್ಸಿನಫಲವಾಗಿ ನಾನು ನಿಂತಲ್ಲಿಯೇ ಒಂದು ಖಾಲಿ

ಡಬ್ಬಿ ಬಂದು ನಿಲ್ಲಬೇಕೆ !—ಎನ್ನುವಷ್ಟರಲ್ಲಿ 'ಧಡಂ' ಎಂದು ಸಪ್ಪಳ ವಾಯಿತು. ಮಗ್ಗುಲಲ್ಲಿ ನೋಡುತ್ತೇನೆ : ಒಬ್ಬ ಜರದ ರುಮಾಲಿನ ಯಜ ಮಾನ ನನ್ನ ಟ್ರಂಕು ಎಡವಿ ಬಿದ್ದಿದ್ದಾನೆ. ಬಾಗಿ ಎಬ್ಬಿಸಬೇಕೆಂಬ ಷ್ಟರಲ್ಲಿ ಆ ಟ್ರಂಕಿನ ಯಜಮಾನನಾದ ನನಗೆ 'ಬುದ್ಧಿ ಇಲ್ಲದವ—ದಾರಿಯಲ್ಲಿ ಟ್ರಂಕು ಇಟ್ಟಿದ್ದಾನೆ' ಎಂದು ಬಯ್ಯುತ್ತ ಏಳಲು ಯತ್ನಿಸುತ್ತಿದ್ದ. ನನಗೆ ಎಬ್ಬಿಸುವದಿರಲಿ, ಮಾತನಾಡಿಸುವಷ್ಟೂ ಕರುಣೆ ಉಳಿಯಲಿಲ್ಲ. 'ಕಾಲಿ ಗೆರಡು ಕಣ್ಣು ಕೊಡಲಿಲ್ಲ ದೇವರು' ಎಂದುಕೊಂಡೆ; ಅಷ್ಟೆ.

ಅವನು ರೇಗಿಕೊಂಡು ಇನ್ನೂ ಏನೇನೋ ಅಂದುಕೊಳ್ಳುತ್ತಿದ್ದ. ಅವನೂ ಆ ಬರಿ ಡಬ್ಬಿಗೇ ಧಾವಿಸಿ ಬಂದಿರಬೇಕು. ನಾನು ಸುಮ್ಮನಿದ್ದೆ. ಅವನು ಕುಂಟುತ್ತ ಅದೇ ಡಬ್ಬಿಯನ್ನು ಹತ್ತಿದ. ನಾನು ನನ್ನ ಭಾರವಾದ ಟ್ರಂಕಿನ ಕಾರಣದಿಂದ ಅದನ್ನೆ ಏರಬೇಕಾಯಿತಾದರೆ ಆ ಯಜಮಾನನಿಗೆ ತನ್ನ ದೇಹವನ್ನು ಹೊತ್ತು ಏರುವುದೇ ಕಷ್ಟವಾಗಿತ್ತು.

ಟ್ರಂಕು ಹಿಡಿದು 'ಜಯ ಬಲಭೀಮ' ಎಂದು ಎತ್ತಿದೆ. ಗಾಡಿ ಎತ್ತರ ವಾಗಿತ್ತು. ಅಲ್ಲಿಯವರೆಗೆ ಹೊರುವುದಾಗಲಿಲ್ಲ. ಯಜಮಾನ ನನ್ನ ಟ್ರಂಕ ನ್ನೆಡವಿ ಬೀಳದಿದ್ದರೆ ಅವರನ್ನು ಸಹಾಯ ಕೇಳಬಹುದಿತ್ತು. ಅವರೂ ಕೈ-ಕೊಡುತ್ತಿದ್ದರು. ಈಗ ಹೇಗೆ ಕೇಳುವುದು ? ಮತ್ತೊಮ್ಮೆ "ಜಯ ಬಲಭೀಮ—ಬಜರಂಗ ಬಲೀಕೀ ಜೈ" ಎಂದು ಎತ್ತಿ ಡಬ್ಬಿಯಲ್ಲಿ ಸರಿಸಿದೆ. ಹಾಸಿಗೆಯನ್ನು ಹೊತ್ತು ಗಾಡಿಯಲ್ಲಿ ಹತ್ತಿದೆ.

ಗಾಡಿಯಲ್ಲಿ ನಾನು, ಆ ಜರದ ರುಮಾಲಿನ ಯಜಮಾನ ಇಬ್ಬರೆ. ಎರಡೇ ಸೀಟುಗಳು ! ನಾನು ಹಾಸಿಗೆ ಬಿಡಿಸಿ ಕುಳಿತೆ. ಒಬ್ಬರಿಗೊಬ್ಬರು ಎದುರು-ಬದರಾದೆವು. ಅವನು ಕಾಲು ತಿಕ್ಕಿಕೊಳ್ಳುತ್ತಿದ್ದ. ಮೊಳಕಾಲು ಕೆತ್ತಿ ರಕ್ತಮಯವಾಗಿತ್ತು.

"ಫೇಡೆ, ಬೀಡಾ ಬೀಡಿ ಸಿಗರೇಟ್" ಎಂದೊಬ್ಬ, "ಬಾಳೇಹಣ್ಣು" ಎಂದೊಬ್ಬ ಕೂಗುತ್ತ ಮಾರಲು ಬಂದರು. ನಾಲ್ಕಾಣೆ ಉಳಿಸಿದ ನೆನ ಪಾಯಿತು. ಕರೆದು ಕೆಲವು ಹಣ್ಣುಕೊಂಡೆ. ಹಣಕೊಡುವಾಗ ನೋಡು ತ್ತೇನೆ. ಆ ಕೂಲಿಯವ ! ಅಂತೂ ಅವನಿಗೇ ಹೋಯಿತೇ ಹಣ ! ಅವ ನೊಂದು ಸಲಾಮು ಹಾಕಿ ಮುಂದೆ ಕೂಗುತ್ತ ಹೊರಟ.

ಯಜಮಾನನ ಎದುರು ಕುಳಿತು ನಾನೊಬ್ಬನೇ ಹಣ್ಣು ತಿನ್ನಬೇಕೆ ? ಅದು ಅವನಿಗೆ ಮತ್ತಿಷ್ಟು ಅಪಮಾನ. ಅವನ ಮೇಲೆ ಕರುಣೆ ಹುಟ್ಟಿದರೂ ಅವನೊಡನೆ ಮಾತಾಡುವ ಧೈರ್ಯ ಬರಲಿಲ್ಲ ನನಗೆ. ಹಣ್ಣು ಕಟ್ಟಿಟ್ಟು ಹಾಸಿಗೆಯ ಮೇಲೆ ಒರಗಿದೆ.

ಅವನಿಗೆ ಹಾಸಿಗೆ ಇದ್ದಿಲ್ಲ. ಇದ್ದುದೊಂದು ಜರಿ ಸೆಲ್ಲೆ ! ಹಾಗೇ ಅಡ್ಡಾಗಿದ್ದಾನೆ. ನನ್ನಲ್ಲಿ ಹೆಚ್ಚಿನ ಹಾಸಿಗೆ ಇತ್ತು. ಹಣ್ಣು ಕೊಡಲು ಧೈರ್ಯ ವಿಲ್ಲದ ನನಗೆ ಹಾಸಿಗೆ ಕೊಡುವ ಎದೆಗಾರಿಕೆ ಹೇಗೆ ಬಂದೀತು ! ಕಣ್ಣು ತೆರೆದಿದ್ದರೆ ಅವನನ್ನು ನೋಡುತ್ತಿರಬೇಕಾಗುತ್ತದೆಂದು ಮುಸುಕೆಳೆದು ಮಲಗಿ ಬಿಟ್ಟೆ.

* * * *

ಆ ಮಾತಿಗೆ ಮೂರು ವರುಷವಾಗಿದೆ. ನನಗೆ ಈಚೆಗೆ ಮದುವೆಯಾಗಿ ಮಡದಿಯೊಡನೆ ಸುಖದಿಂದಿದ್ದೇನೆ.

ಮೊನ್ನೆ ತವರಿಗೆ ಹೊರಟ ಅವಳು ತನ್ನ ಟ್ರಂಕು ಸಾಲದೆಂದು ಹಟ ಮಾಡಿದಳು. ನನ್ನ ಟ್ರಂಕಿನಮೇಲೆ ಅವಳ ಕಣ್ಣು. ನನ್ನ ಪ್ರವಾಸಗಳನ್ನೆಲ್ಲ ಆಗ ಮಾಡಿದ ನನ್ನ ಆ ಟ್ರಂಕನ್ನು ನಾನು ಇನ್ನೊಬ್ಬರಿಗೆ ಕೊಡಲಾರೆ. ಆದರೆ ಇವಳು 'ಇನ್ನೊಬ್ಬ' ಳಲ್ಲದ್ದರಿಂದ ಕೊಡಲೇಬೇಕಾಯಿತು. ಅವಳ ಪುಟ್ಟ ಟ್ರಂಕು ನನಗೆ ಕಾಣಿಕೆಯಾಗಿ ಬಂತು. ನನ್ನ ಬರವಣಿಗೆಯ ಸಾಹಿತ್ಯವನ್ನೆಲ್ಲ ಅದರಲ್ಲಿ ತುಂಬಿಕೊಟ್ಟಳು. ಪ್ರತಿಯಾಗಿ ಅವಳ ಬಟ್ಟೆ-ಬರೆ, ವಸ್ತ್ರ-ಒಡವೆ ಗಳನ್ನೆಲ್ಲ ನನ್ನ ಟ್ರಂಕಿನಲ್ಲಿ ಹಾಕಿಕೊಡಬೇಕೆಂದು ನಾನವಳ ಸಹಾಯಕ್ಕೆ ನಿಂತೆ. ಅವಳಲ್ಲಿ ಏನೆಲ್ಲ ಸಂಗ್ರಹವಿದೆಯೆಂದು ನೋಡುವ ಕುತೂಹಲ ವಾಯಿತು. ಮಕ್ಕಳ ಆಟಿಗೆಗಳಿವೆ ಅದು ಈಗಿಂದಲೇ ಏಕೋ ! ಚಿತ್ರ ಸಂಗ್ರಹವಿದೆ. ನನ್ನಿಂದ ಅಪಹರಿಸಿದ ಸಿನೆಮಾ ತಾರೆಗಳ ಆಲ್ಬಂ ಇನ್ನೂ ಅವಳು ಹರಿದುಹಾಕಿಲ್ಲ. ಅದನ್ನು ಮೊದಲ ಸಲ ನನ್ನಲ್ಲಿ ನೋಡಿದಾಗ— ಮತ್ಸರವೋ ಸಂಶಯವೋ ಕಾಣೆ—ಸುಡುತ್ತೇನೆಂದು ಬೆದರಿಸಿದ್ದಳು. ಮುಂದೆ ಅದು ನನಗೆ ತಿಳಿಯದೆ ಕಾಣೆಯಾದದ್ದು ಅವಳಲ್ಲಿ ವಾಸವಾಗಿದೆ. ನಮ್ಮ ಮದುವೆಯ ಕಾಲದ ಭಾವಚಿತ್ರಗಳಿವೆ. ಅವನ್ನೆಲ್ಲ ಒಂದೊಂದಾಗಿ

ನೋಡುತ್ತಿರುವಾಗ ಮಧ್ಯೆ ಒಂದು ಭಾವಚಿತ್ರ ನನ್ನ ಕಣ್ಣು ಸೆಳೆಯಿತು. ನನ್ನ ನೆನಪಿನ ಹೊತ್ತಿಗೆಯನ್ನು ಕೆದಕಿ-ಬೆದಕಿದಾಗ ಅದು ಆ ಜರದ ರುಮಾಲಿನ ಯಜಮಾನನದೆಂದು ಅನಿಸಿತು. ನನಗೆ ಒಂದು ಕ್ಷಣ ಗಾಬರಿಯಾಯಿತು. ತೋರಗೊಡದೆ ಸಾವರಿಸಿಕೊಂಡು “ಇದು ಯಾರೆ?” ಎಂದು ಕೇಳಿದೆ.

“ನನ್ನ ಮದುವೆಗಾಗಿ ಮಡಿದ ತಂದೆ!” ಎಂದಳು. ಕಣ್ಣು ತುಂಬಿ ಬಂದಿತ್ತು.

ನನಗೆ ಏನು ಹೇಳಬೇಕೊ ತಿಳಿಯದು!

“ಮದುವೆಗಾಗಿ ಮಡಿದ ತಂದೆ! ಅದು ಹೇಗೆ?” ಎಂದು ಕೇಳಿದೆ.

“ವರ ಹುಡುಕಲು ಹೋದಾಗ ಬಿದ್ದಗಾಯದಿಂದ ಸೆಟೆ ಹಿಡಿದವರು ಮೇಲೇಳಲೇ ಇಲ್ಲ” ಎಂದಳು.

# ಬದಲಾವಣೆ

ಹೆಸರೇನೋ ಉದಯ. ಆದರೆ ಅವನು ಉದಯಕ್ಕೆ ಮುಂಚೆ ಎಂದೂ ಎದ್ದುದಿಲ್ಲ. ಏಳುವುದೇ ಎಂಟು ಗಂಟೆ. ಅದು ಚಹಾಮಾಡಿ ಎಬ್ಬಿಸಬೇಕು. ದಿನಾ ಏಳುವಾಗ 'ತಡವಾಯಿತು' ಎಂಬ ಮಂತ್ರ ಜಪಿಸಿ ಮೈಮುರಿಯುತ್ತಾನೆ. ತಾನು ಏಳುವುದು ತಡವೆಂದಲ್ಲ; ಚಹಾಕ್ಕೆ ತಡವಾಯಿತೆಂದು.

ಅವನ ಜೀವನದಲ್ಲಿ ಚಹಾ ಇಷ್ಟು ಮಹತ್ವದ ಸ್ಥಾನ ಪಡೆದಿದೆಯೆಂದು ಅವನಿಗೆ ಅನಿಸಿದ್ದೂ ಇಂದೇ. ಮನೆಯಾಕೆ ಹೊತ್ತಿಗೆ ಮುಂಚೆ ಎದ್ದು ಕಸ ಬಳಿದು, ಪಾತ್ರೆತೊಳೆದು, ಒಲೆಗೆ ಬೆಂಕಿಹಾಕಿ, ಹೊಸಲಿಗೆ ರಂಗವಲ್ಲಿ ಇಟ್ಟು ಬಂದ ನಳದಿಂದ ನೀರು ತುಂಬುತ್ತ ಹಾಲಿನವನನ್ನು ಸ್ವಾಗತಿಸಿ 'ಇವರಿನ್ನೂ ಏಳಲಿಲ್ಲ' ಎಂದು ಮಂತ್ರ ಹೇಳುತ್ತ ಚಹಾ ಮಾಡುವುದು ಅವಳ ವಾಡಿಕೆ. ಚಹಾ ಆಗಿದೆಯೆಂದಾಗ ಉದಯ ಏಳುತ್ತಾನೆ. ಆದರೆ ಚಹಾ ಆದುದು ಮುಸುಕಿನಲ್ಲಿಯೇ ಅವನಿಗೆ ತಿಳಿದರೂ 'ಏಳಿ' ಎಂಬ ಕರೆ ಬರದೆ ಅವನು ಎದ್ದವನೇ ಅಲ್ಲ. ಮುಖಕ್ಕೆ ಬಿಸಿನೀರಾಗಬೇಕು. ಮುಖ ತೊಳೆಯುವಾಗ ಚಹಾ ಸೋಸುತ್ತಿದ್ದ ಬಚ್ಚಲಿದಿಂದ ಚಹಾದ ಕಪ್ಪಿಗೇ ಇವನು ಕೈ ಚಾಚಬೇಕು. ಗುಟುಕು ಗುಟುಕು ಚಹಾ ಹೀರುತ್ತ ಅದು ಸರಿಯಾಗಿಲ್ಲವೆಂದು ಜರಾ ಹಾಕಿ ಮತ್ತೊಂದು ಕಪ್ಪು ಸುರುವಿಸಿಕೊಂಡು ಬಾಯಿ ಚಪ್ಪರಿಸುತ್ತ 'ಇಂದು ತಡವಾಯಿತೆ'ಂದು ಜಪಮಾಡಿ, ನಾಳೆ ನಾನೇ ಎದ್ದು ಇದಕ್ಕೂ ಬೇಗ ಒಳ್ಳೆಯ ಚಹಾ ಮಾಡುತ್ತೇನೆ.—ಎನ್ನುತ್ತಾನೆ. ಹತ್ತು ವರುಷಕ್ಕೆ ಮುಂಚೆ ಬಂದ ಇವನ ರಾಣಿ ಕಮಲೆಗೆ ಇವನ ಈ ನಿರ್ಧಾರದ ಮಾತುಗಳ ಅರ್ಥವಾಗದೆ ಇಲ್ಲ. ಅವಳು ಏಳುವಂತೆ ಎದ್ದು, ಮಾಡುವಂತೆ ತನ್ನ ಪಾಲಿನ ಕೆಲಸ ನಿರ್ವಹಿಸುತ್ತಾಳೆ. ಒಂದು ದಿನವೂ ತನ್ನ ರಾಯ ಚಹಾಕ್ಕೆ ಮೊದಲು ಎದ್ದವನಲ್ಲ,—ಒಂದಾನೊಮ್ಮೆಯೂ ಅದು ಸರಿಯಾಗಿದೆ ಎಂದವನಲ್ಲ.—ಆದರೆ ಎರಡು ಕಪ್ಪು ಹೀರದೆ ಬಿಟ್ಟವನಲ್ಲ !

ಸುಧಾರಣೆ ಯಾರಲ್ಲಿ ಆಗಬೇಕೆಂದೇ ಅವಳಿಗೆ ತಿಳಿಯುವುದಿಲ್ಲ. ಇದಕ್ಕೂ ಮುಂಚೆ ಎದ್ದು ಇದಕ್ಕೂ ಒಳ್ಳೆಯ ಚಹಾ ಮಾಡಿದರೆ ತನ್ನ ಪತಿ ತನಗೆ ಉಳಿಸಲಾರನೆಂದೂ ಅವಳ ಎಣಿಕೆ. ಆ ಕಾರಣದಿಂದಲೂ ಅಲ್ಲ. ಆಕೆಯೇನೋ ಶುಕ್ರಉದಯಕ್ಕೆ ಏಳುತ್ತಾಳೆ. ಎದ್ದ ಮೇಲೆ ಅವಳಿಗೆ ತನ್ನದೇ ಆದ ಕೆಲಸ ವಿದೆ ಅದನ್ನೆಲ್ಲ ಮುಗಿಸದೆ ಅವಳು ಚಹಾರಾಧನೆ ಮಾಡಲಾರಳು ರಾತ್ರಿ ಸರಿ ಹೊತ್ತಿನವರೆಗೆ ಎಚ್ಚರಿದ್ದು ಮೂಗಿನೆದುರು ಪುಸ್ತಕವನ್ನೊ ಪೇಪರನ್ನೊ ಹಿಡಿದು ಓದುವವನಂತೆ ನಟಿಸುತ್ತ ಪುಟ ತಿರುವುತ್ತ ಮಧ್ಯೆ ಮಾತನಾಡಿಸಿದರೆ ವಿವಶನಾದಂತೆ ಉತ್ತರಿಸುವ ರಾಯನನ್ನು ಇದಕ್ಕೂ ಮುಂಚೆ ಎಬ್ಬಿಸಲು ಅವಳಿಗೆ ಇಷ್ಟವೂ ಇಲ್ಲ ಇನ್ನಷ್ಟು ನಿದ್ರೆ ಮಾಡಲಿ—ಎಂದೇ ಅವಳ ಅಪೇಕ್ಷೆ. “ತಡವಾಯಿತು” “ಚೆನ್ನಾಗಿಲ್ಲ” ವೆಂಬ ಮಾತುಗಳು ಅವಳಿಗೆ ದಿನದ ಉಡುಗೊರೆ. ಅದನ್ನು ಕೇಳದೆ ಅವಳ ದಿನವೇ ಸರಿದುದಿಲ್ಲ. ಸರಿಯು ವಂತೆಯೂ ಇಲ್ಲ.

೨

ಏನೋ ಕೆಲಸ ಮಾಡಿಕೊಂಡಿದ್ದ ಉದಯನಿಗೆ ತನ್ನ ಚಾಕರಿಯಲ್ಲಿ ಇಲ್ಲದ ಅತೃಪ್ತಿ. ಅವನ ಗೆಳೆಯರು ಎಂದೋ ಅವನು ಬರೆದ ಎರಡು ಸಾಲುಗಳನ್ನೆತ್ತಿ “ನೀನು ಲೇಖಕನಾಗಬಲ್ಲೆ” ಎಂದು ಅವನ ಕಿವಿ ಚುಚ್ಚುವರು. ಮತ್ತೆ ಇನ್ನೂ ಕೆಲವರು “ನೀನು ದೊಡ್ಡ ಬಿಜಿನೆಸ್ ಮಾಡಲಾರೆಯಾ? ಎಣೆಯಿಲ್ಲದ ಬುದ್ಧಿಸಾಮರ್ಥ್ಯವಿದೆ ನಿನಗೆ ಹರಿತವಾದ ನಾಲಗೆ ಇದೆ.” ಎಂದು ತಪ್ಪು ತುಟಿಕಚ್ಚಿಕೊಳ್ಳುವರು. ದೊಡ್ಡ ಬಿಜಿನೆಸ್ ಎಂದರೇನೆಂದು ಅವನಿಗೆ ಹೊಳೆಯದು. ಅಂಥ ಯಾವುದಕ್ಕೂ ಹಣಬೇಕೆಂದಾಗ ಅವನ ಮನಸ್ಸು ಮುದುಡಿಕೊಳ್ಳುವುದು.

ಹೀಗಾಗಿ ಅವನಿಗೆ ಇದ್ದ ಉಳಿಗದಲ್ಲಿ ಅಶ್ರದ್ಧೆ. ಇಲ್ಲದ ಕೆಲಸದ ಬಗ್ಗೆ ಅನಿಶ್ಚಿತತೆ ತಲೆದೋರಿತು.

ಬಂಡವಾಳವಿಲ್ಲದ ಕೆಲಸವೆಂದು ಬರವಣಿಗೆಯನ್ನೇ ಕೈಕೊಳ್ಳಬೇಕೆಂದು ಒಮ್ಮೆ ನಿಶ್ಚಯಿಸಿದ. ಅದಕ್ಕೆ ಅವನ ಸ್ನೇಹಿತರೇ ಕಾರಣರಾಗಿ ಅವನಿಂದ “ಮಾತು” ತೆಗೆದುಕೊಂಡು ಬಿಟ್ಟರು. ಅದೇ ಹುರುಪಿನಲ್ಲಿ ತಾನೊಂದು ತಿಂಗಳಲ್ಲಿ ಒಂದು ಪುಸ್ತಕ ಬರೆದುಕೊಡುತ್ತೇನೆಂದು ಸಾರಿಬಿಟ್ಟ.

ಪುಸ್ತಕ ಬರೆಯಬೇಕಾದರೆ ಏನೆಲ್ಲ ಬೇಕೆಂದು ಪಟ್ಟಿ ಮಾಡಿದ. ಇನ್ನು ಪೆನ್ನು ಲೆಕ್ಕ ಬರೆಯುವಂಥಾದ್ದು—ಚೆನ್ನಾಗಿಲ್ಲ. ಒಂದು ಒಳ್ಳೆಯ ಪೆನ್ನಾಗ ಬೇಕು. ಒಂದು ಕುಡಿಕೆ ಮಸಿ ಒಂದು ಗಡ್ಡಿ ಕಾಗದ ಇಷ್ಟನ್ನು ತರಿಸಿ ಕೊಂಡ. ಇಷ್ಟೇ ಬಂಡವಾಳ ಸಾಕೆನಿಸಿತ್ತು ಅವನಿಗೆ.

ಬರೆಯಬೇಕೆಂದು ಕುಳಿತರೆ ಏನು ಬರೆಯಬೇಕೆಂದೇ ತಿಳಿಯದು. ಯೋಜನೆಯೊಂದು ಬೇಕೆನಿಸಿ ಕಥೆ ಹುಡುಕಾಡಿದ. ನಾಲ್ವತ್ತೆರಡರ ಹೋರಾಟ, ದೇಶ ವಿಭಜನೆ. ಸ್ವಾತಂತ್ರ್ಯಪ್ರಾಪ್ತಿ, ಸ್ವಾತಂತ್ರ್ಯೋತ್ತರ ಗೊಂದಲಗಳು—ಹೀಗೆ ಪ್ರಚಲಿತ ವಿಷಯಗಳನ್ನು ಜಾಲಿಸಿದ. ಅದನ್ನೊಂದು ಕ್ರಮದಲ್ಲಿ ಹರಿಯಿಸಬೇಕೆಂದು ಕೆಲವು ಪುಸ್ತಕಗಳನ್ನು ತಂದು ಓದಿದ. ಓದಿದ ಪುಸ್ತಕಗಳಲ್ಲಿ ಅವನಿಗೆ ಅತೃಪ್ತಿಯೇ ಎದುರಾಯಿತು. ತನ್ನ ಕೃತಿ ಹತ್ತರೊಡನೆ ಹನ್ನೊಂದಾಗಬಾರದೆಂದು ಓದುವುದನ್ನು ನಿಲ್ಲಿಸಿಬಿಟ್ಟ.

ತಿಂಗಳ ಕೊಡದಿಂದ ದಿನಗಳು ಒಂದೊಂದಾಗಿ ಸೋರುತ್ತ ಹೋದವು. ತಂದ ಕಾಗದ ಹೊಗೆ ತಿಂದು, ಮಸಿ ಗಟ್ಟಿಯಾಯಿತು.

೩

ಒಮ್ಮೆ ಅವನಿಗೆ ಹೊಳೆಯಿತು. ತನ್ನ ಮನೆ ಬರವಣಿಗೆಗೆ ತಕ್ಕುದಾಗಿಲ್ಲವೆಂದು. ಬೇರೊಂದು ಮನೆ ಸಿಕ್ಕುವುದು ಸಾಧ್ಯವಿಲ್ಲ. ಖಾಲಿಯಾಗುವ ಮನೆಗಳೆಲ್ಲ ಸರಕಾರೀ ಚಾಕರರಿಗೆಂದು ಮೀಸಲು.

ಹೊಸದಾಗಿ ಕಟ್ಟಿಸಿದ ಮನೆಗಳನ್ನು ನೋಡಿ 'ಇಂಥ ಮನೆಯಾಗಿದ್ದರೆ ಹತ್ತು ಕಾದಂಬರಿ ಹೊಸೆಯುತ್ತಿದ್ದೆ'—ಎನ್ನುವ. ಯಾರದೋ ಮನೆಯಲ್ಲಿ ಒಂದು ಬರೆಯುವ ಡೆಸ್ಕು ನೋಡಿದ. ಅಂಥದೊಂದಾದರೆ ಬರವಣಿಗೆ ಶ್ರಮದಾಯಕವಾಗುವದಿಲ್ಲವೆಂದು ಪಡೆಯಲಿಚ್ಛಿಸಿದ. ಇವನನ್ನು ಬರಹಕ್ಕೆ ಪ್ರೇರಿಸಿದ ಸ್ನೇಹಿತ ಒಂದು ಡೆಸ್ಕು ತೆಗೆಸಿಕೊಟ್ಟು 'ಇನ್ನಾದರೂ ಬರೆ ಮಹಾರಾಯಾ'—ಎಂದ.

ಇನ್ನೇನಾಗಬೇಕು ? ಮನೆಯಲ್ಲಿ ವಾತಾವರಣ ಸರಿಯಾಗಿಲ್ಲ. ಮನೆ ತುಂಬ ಮಂದಿ. ಹುಡುಗರ ಕಿಲಕಿಲಾಟ. ಇಂಥದರಲ್ಲಿ ಹೇಗೆ ಬರೆಯಬೇಕೆಂದೇ ತಿಳಿಯದು. ಕೆಲಸಕ್ಕೆಂದು ಹೊರಕ್ಕೆ ಹೋದರೆ ಮನೆಯ ಬಗ್ಗೆ

ಜೆಚ್ಚಿಸ ಜ್ಞಾನವಿರುವುದಿಲ್ಲ. ಮನೆ ಸೇರುವ ಚಪಲ ಹೆಚ್ಚಾಗಿರುತ್ತದೆ. ಊಗಾದರೆ ಮನೆಯಲ್ಲಿ ಇಲ್ಲದ ಸಾಮಾನುಗಳ ವರದಿ ಒಪ್ಪಿಸುವ ಮಡದಿ: ಇಷ್ಟ ಕೊಂಪರೆಗಳನ್ನು ತೋಡಿಕೊಳ್ಳುವ ತಾಯಿ: ಇವೆರಡನ್ನೂ ಅರಿಯದೆ ತಮ್ಮ ಆಟವಲ್ಲಿಯೇ ತಲ್ಲೀನರಾದ ಮಕ್ಕಳು ! ತನ್ನನ್ನು ಆಟಕ್ಕೆ ಸೇರಿಸುವದಿಲ್ಲ ವೆಂದು ದೂರಿಕೊಳ್ಳುವ ಒಬ್ಬ ಮಗ. ತನ್ನನ್ನೆ–ಸಾಹುಕಾರನಂತೆ–ಬೆನ್ನುಹತ್ತಿ ತಿರುಗುವ ಪ್ರಸಂಗ—ಇವನ್ನೆಲ್ಲ ಎದುರಿಸಿ ಏನು–ಹೇಗೆ ಬರೆಯಬೇಕು ?

‘ ನನಗೇಕೆ ಮುಂಬಾಲು ಬಿದ್ದಿರುವಿ ಮಗನೇ–’ ಎಂದು ಕೇಳಿದ ಚಿಕ್ಕನನ್ನ ‘ ಅಪ್ಪ ಹೇಳಿದಳು ’ ಎಂದನವ. ‘ ಸರಿ; ಅವಳಿಗಿನ್ನೇನು ಕೆಲಸ ? ನಾನು ಮನೆ ಯಾಕೆ ಸೇರಿದ್ದೇನೆಂದು ಅವಳಿಗೆ ಅರ್ಥವಾಗದು ’ ಎಂದು ಕೂಗಿಕೊಂಡ.

“ ಯಾಕೆ ಅಂದರೆ—ರಜಾ ತಗೊಂಡೀರಿ—ಅದಕ್ಕೇ ಮತ್ತೆ ಮನೆಯಲ್ಲಿದ್ದೀರಿ ” ಎಂಬ ಮಡದಿಯ ವಿವರಣೆ ಕೇಳಿ ಉದಯ ರೇಗಿ,

“ ರಜಾ ಯಾಕ ತಗೊಂಡೆ ” ಎಂದು ಕಿರಚಿದ.

“ ಆಫೀಸಿನಲ್ಲಿ ಬಹಳ ಕೆಲಸ ಇದ್ದೀತು !” ಅಂದಳು

“ ಆಫೀಸಿನಲ್ಲಿ ಕೆಲಸ ಬಹಳ ಇದ್ದರೆ ರಜಾ ಕೊಡುತ್ತಾರೇನೇ ? ” ಎಂದು ಅವಳ ದಡ್ಡತನಕ್ಕೆ ಕನಿಕರಪಟ್ಟ.

“ ಹಾಗಾದರೆ ಏನೂ ಕೆಲಸವಿರಲಿಕ್ಕಿಲ್ಲ ! ” ಎಂದಳು.

ಉದಯ ಅವಳ ತರ್ಕಕ್ಕೆ ನಗಬೇಕಾಯಿತು. ಆದರೆ ತಾನು ಪುಸ್ತಕ ಬರೆಯಬೇಕಾಗಿ ಮನೆ ಸೇರಿದ್ದೇನೆಂದು ಇನ್ನೂ ಅವಳಿಗೆ ತಿಳಿಯದು. ಅದನ್ನು ಹೇಗೆ ತಿಳಿಯಪಡಿಸುವುದು ?–ಎಂದು ಚಿಂತಿಸಿದ. ಹೇಳಿದರೂ ಅವಳು ನಂಬಬೇಕಲ್ಲ ! “ ಬರೆಯಬೇಕಾದರೆ ರಜಾ ಯಾಕ ತಗೋಬೇಕು ?” ಎಂದರೆ !

ಹಳ್ಳಿಗೆ ಹೋಗಿ ಅಲ್ಲಿ ಸಾಧ್ಯವಾದರೆ ನೋಡಬೇಕೆಂದು ಒಮ್ಮೆ ಹಳ್ಳಿಯ ಮನೆಗೆ ಹೊರಟ. ಕಮಲೆ ಒಬ್ಬ ಹುಡುಗನನ್ನು ‘ಛೂ’ ಬಿಟ್ಟಳು.

“ಸರಿ, ನಿನಗೆ ಬುದ್ಧಿಯಿಲ್ಲ. ನಾನೇನು ಸುಮ್ಮನೆ ಹೋಗುತ್ತೇನೆಯೇ?”

“ ಅಲ್ಲದೆ ನಿಮಗೆ ಅಲ್ಲೇನು ಕೆಲಸ ? ”

“ ನನ್ನ ಕೆಲಸ ನಿನಗೆ ತಿಳಿಯದು ”

"ತಿಳಿಯುವಂಥಾದ್ದು ಇರುವದಾದರೂ ಏನದು ?"

"ನನಗೊಂದು ಪುಸ್ತಕ ಬರೆಯಬೇಕಾಗಿದೆ."

"ಹೋ! ಅದಕ್ಕಾಗಿ ಅರಣ್ಯ ಸೇರಿ ತಪಸ್ಸು ಮಾಡಬೇಕೇನು ?"

"ಇಲ್ಲಿ ನಿಮ್ಮ ನಡುವೆ—ಈ ಗದ್ದಲದಲ್ಲಿ—ಬರೆಯುವದು ಹೇಗೆ ?"

"ಬರೆಯುವದಿದ್ದರೆ ನಡುವೆ, ಕಡೆಗೆ ಎಂಬ ನೆಪವೇಕೆ ? ಕುಳಿತು ಬರೆದರಾಯಿತು."

ಉದಯನ ಕೆನ್ನೆಗೊಂದು ಹೊಡೆದಂತಾಯಿತು. ನಾವರಿಸಿಕೊಂಡು "ವಾತಾವರಣ ಬೇಕು" ಎಂದ.

"ಅಂದರೆ ?"

"ಪ್ರಶಾಂತವಾದ ಪರಿಸ್ಥಿತಿ"

"ನಿಮಗೂ ನನಗೂ ಕನಸಿನಲ್ಲೇ ಸರಿ ಅದು."—ಎಂದಳು.

ಇವಳಿಗೂ ಇದ್ದ ಸ್ಥಿತಿಯಲ್ಲಿ ಬೇಸರ ಬಂದಿದೆಯೆಂದು ಉದಯನಿಗ ಮೊದಲಸಲ ಕಂಡುಬಂತು. ಪ್ರಶಾಂತವೆಂದರೇನೆಂದೇ ಅವಳಿಗೆ ತಿಳಿಯದು—ಎಂದವನ ಎಣಿಕೆಯಾಗಿತ್ತು. ಅದನ್ನವಳ ಅನುಭವಕ್ಕೇ ತಾನು ತಂದಿಲ್ಲವೆಂದು—ಅದವಳಿಗೆ ತಿಳಿಯಬಾರದೆಂದರೆ! ಇದ್ದುದು ಪ್ರಶಾಂತವಲ್ಲವಾದರೆ ಇಲ್ಲದ್ದು ಪ್ರಶಾಂತವಿರಬಾರದೇನು ? ಇದ್ದ ಕಷ್ಟ-ಕಾರ್ಪಣ್ಯಗಳನ್ನು ದಾಟಿ ಇಲ್ಲದ ಸುಖ-ಸಂತೋಷಗಳನ್ನವಳು ಕಲ್ಪಿಸಲಾರಳೇನು ? ಬಯಸಲಾರಳೇನು ? 'ಅಪ್ಪಾ ಬೇಸರ' ವೆಂದಾಗ ಏನೋ ಆಸರ ದೊರೆತರೆ ಅದೇ ಒಂದಿಷ್ಟು ಆರಾಮವೆನಿಸುವುದಿಲ್ಲವೇ ?

ಸರಿ; ಮಡದಿಗಿಲ್ಲದ ಪ್ರಶಾಂತ ವಾತಾವರಣ ತನಗೇಕೆ? ಅಲ್ಲಿದ್ದು ತಾನು ಬರೆಯುವುದಾದರೂ ಏನು ? ಅಲ್ಲದೆ ಹಳ್ಳಿಯ ವಾತಾವರಣ ತಿಳಿಯಾಗಿಯೇ ಇದ್ದೀತೆಂದೇನು ನಂಬಿಕೆ ? ಇದ್ದಲ್ಲಿಯೇ 'ಇಲ್ಲದ್ದ'ನ್ನು ತರುವ ಯತ್ನ ಮಾಡಬೇಕೆಂದು ಯೋಚಿಸಿದ.

ಆಫೀಸಿನ ಕೆಲಸವಿಲ್ಲ. ಮಧ್ಯಾಹ್ನ ನಿದ್ರೆ ಮಾಡಿ ಅವನಿಗೆ ಅಭ್ಯಾಸವಿಲ್ಲ. ಆದರೂ ಹೊರಳಾಡಿ ಸ್ಫೂರ್ತಿಯಾರಾಧನೆ ಮಾಡುವ. ನಿದ್ರೆ ಬಂದೀತಲ್ಲದೆ ಆ ಸ್ಫೂರ್ತಿ ಬರಲಿಲ್ಲ. ಬಂದದ್ದೇ ಇರಲಿ—ಎಂದು ಹಗಲು ನಿದ್ರಿಸಲು ಕಲಿತ. ಅದೊಂದು ಪಾಠವಾಯಿತು.

ಒಮ್ಮೆ ಕಮಲೆ ಎದ್ದು ಕೆಳಗೆ ಹೋದುದನ್ನು ಉದಯ ಮುಸುಕಿನಲ್ಲಿಯೇ ನೋಡಿದ. ಗಂಟೆ ಎಷ್ಟು ಎಂದು ತಲ್ಲಿಂದಲೇ ಕೇಳಿದ. 'ನೋಡಿಲ್ಲ'ವೆಂದು ಉತ್ತರ ಬಂತು. ಮತ್ತೆ ಸ್ವಲ್ಪ ಸಮಯವಾದ ಮೇಲೆ ಹೊಗೆಯಾಡುವುದನ್ನು ಗ್ರಹಿಸಿದ. ಮುಸುಕು ಓರೆ ಮಾಡಿದಾಗ ಕಮಲೆ ದೀಪ ಹಿಡಿದು ಮೇಲೆ ಬಂದವಳು ಹಾಸಿಗೆಯಲ್ಲಿ ಪವಡಿಸಿದಳು; ಹಾಗೇ ನಿದ್ರೆ ಮಾಡಿದಳು.

ಇಷ್ಟು ಬೇಗ ಇವಳು ಯಾಕೆ ಏಳಬೇಕು? ಒಲೆಗೆ ಆಗಲೆ ಯಾಕೆ ಬೆಂಕಿ ಇಡಬೇಕು? ಅಂಥ ಅವಸರವೇನೀಗ? ಎಂದು ಕೂಗಾಡಿದ. ತನ್ನ ಕೂಗಿಗೇ ತಾನು ಎಚ್ಚತ್ತು ವ್ಯವರಿದು ಎದ್ದು ಕುಳಿತ. ಗಂಟೆ ನೋಡುತ್ತಾನೆ—ಇನ್ನೂ ಐದು ಗಂಟೆ! ದೀಪ ಹಿಡಿದು ಕೆಳಗೆ ನಡೆದ. ನೋಡುತ್ತಾನೆ ಒಲೆಯಲ್ಲಿ ಕೆಂಡ ನಿಗಿನಿಗಿಯಾಗಿದೆ ನೀರು ಬಿಸಿಯಾಗಿದೆ. ಇಂದು ತಾನೇ ಚಹಾ ಮಾಡಬೇಕೆಂದು ಪಾತ್ರೆ ಹುಡುಕಿದ. ಚಹಾಕ್ಕೆ ನೀರಿಟ್ಟು ಮುಖ ತೊಳೆದ. ಎರಡು ಕಪ್ಪು ಚಹಾ ಮಾಡಿ ಕಮಲೆಯನ್ನು ಎಬ್ಬಿಸಬೇಕೆಂದ. ದಿನವೂ ಬೆಳಗಿನ ನಿದ್ರೆ ತೊರೆದು ದುಡಿಯುವ ಅವಳನ್ನು ನೆನೆದು ಪಾಪ--- ಮಲಗಲಿ ಎಂದು ಚಹವನ್ನೆಲ್ಲ ತಾನೇ ಸುರಿದುಬಿಟ್ಟ.

ಅದು ದಿನದಂತೆಯೂ ಇದ್ದಿಲ್ಲ. 'ಚೆನ್ನಾಗಿಲ್ಲ' ಎಂದ. ಆದರೂ ಎಲ್ಲಾ ಕುಡಿದು ಹಾಗೇ ಮೇಲಕ್ಕೆದ್ದು ಇಂಥ ನಸುಕಿನಲ್ಲೇನು ಕೆಲಸ ಎಂದು ಮತ್ತೆ ಹಾಸಿಗೆಗೆ ಸಾರಿದ.

ಕಮಲೆಗೆ ಎಚ್ಚರಾಯಿತು. ಉದಯನಿಗೆ ನಿದ್ರೆ ಎಳೆಯಿತು.

'ಮತ್ತೆ ಚಹದ ಕರೆಗೆ ಇವನೆದ್ದಾಗ ಎಂಟು ಗಂಟೆ! ಏಳುವಾಗ 'ತಡವಾಯಿತು' ಎನ್ನಲಿಲ್ಲ. ಚಹಾ ಕುಡಿಯುವಾಗ 'ಚೆನ್ನಾಗಿಲ್ಲ'ವೆನ್ನಲಿಲ್ಲ. ಅದನ್ನು ಈ ಮೊದಲೇ ತನ್ನ ಚಹಾಕ್ಕೆ ಅಂದುಬಿಟ್ಟಿದ್ದಾನೆ!

ಕಮಲೆ ಆ ಬೆಳಗು ಬದಲಾವಣೆ ಕಂಡಳು.

“ನಿಮ್ಮ ಚಹಾ ಹೇಗೆ ಆಗಿತ್ತು?”

“ನಿನ್ನನ್ನು ಎಬ್ಬಿಸಬೇಕೆಂದೆ; ನೀನು ನಿದ್ದೆ ಮಾಡಿದ್ದೆ.”

“ನನಗೆ ಕೊಟ್ಟಿದ್ದರೆ ನಿಮ್ಮ ಮಾತು ಮುಟ್ಟಿಸುತ್ತಿದ್ದೆ.”

"ಯಾವ ಮಾತು?"

"ನೀವು ದಿನಾ ಹೇಳುವ 'ಚೆನ್ನಾಗಿಲ್ಲ'ವೆಂಬ ಮಂತ್ರ."

"ಯಾಕೆ?"

"ಹಾಲೇ ಇದ್ದಿಲ್ಲ."

"ಹಾ!—ಹೊ!"—ಉದಯ ತಡವರಿಸಿದ.

"ಹಾಲಿನವ ಬಂದಾಗ ನೀವು ಮತ್ತೆ ಮಲಗಿದ್ದಿರಿ"

"ಅದಕ್ಕೇ ಇರಬೇಕು."

"ಏನು?"

"ಇಂದು ನಿನ್ನ ಚಹಾ ರುಚಿಯಾಗಿದೆ."

"ಕೃತಾರ್ಥಳಾದೆ!"

ಅಂದು ಕಮಲೆಯ ಕೃತಾರ್ಥವದನದಲ್ಲಿಯ ಪ್ರಶಾಂತತೆಯನ್ನು ಹಿಡಿದ ಉದಯ ಚೇತರಿಸಿಕೊಂಡ. 'ಕವಿಗೆ ಸಹಾನುಭೂತಿ ಅರ್ಧ ಸ್ಫೂರ್ತಿ' ಎನ್ನುತ್ತಾರೆ. ಮಡದಿಗೆ ಒಂದು ಒಳ್ಳೆಯ ಮಾತನಾಡಿದರೆ ಅವಳು ಇವನಿಗೆ ಸ್ಫೂರ್ತಿಯಾಗದಿದ್ದಾಳೆ?

"ನನ್ನ ಕಾದಂಬರೀ" ಎಂದ. "ನನ್ನ ಪುಂಡರೀಕಾ" ಎಂದು ಅವಳೆನ್ನಬೇಕೆಂದು ಇವನ ಆಸೆ. ಅದರವಳಿಗೆ ಮುಂದಿನ ಕೆಲಸಗಳ ಚಿಂತೆ! ಉದಯ ಎದ್ದು ಅವಳ ಬಳಿ ಹೋದ. ಕಮಲೆಯೂ ದೂರ ಸರಿಯಲಿಲ್ಲ.

*

ಉದಯ ಕಾದಂಬರಿ ಬರೆಯತೊಡಗಿದ್ದಾನೆ. ಅವನಿಗೆ ಸ್ಫೂರ್ತಿಯ ಸೆಲೆ ಕಾಲಲ್ಲಿಯೇ ಬಂದಂತಾಗಿದೆ—ಭಾಗ್ಯವಂತ ಲಕ್ಷ್ಮಿಯನ್ನು ಎಡವಿದಂತೆ!

# ಸಾಹಿತ್ಯ ಭಂಡಾರಿ

ಯಾವುದೇ ಒಂದು ಕನ್ನಡ ಪುಸ್ತಕ ಭಂಡಾರವನ್ನು ನೋಡಿರಿ ಅಲ್ಲಿ ಯಾವಾಗಲೂ ನಾಲ್ಕು ಜನ ಸಾಹಿತಿಗಳು ಕುಳಿತು, ನಿಂತು ಸಾಹಿತ್ಯದ ಆಗು-ಹೋಗುಗಳ ಚರ್ಚೆ ನಡೆಸಿರುತ್ತಾರೆ. ಕನ್ನಡ ಪುಸ್ತಕಗಳ ವಿಮರ್ಶೆ ನಾನಾ ರೀತಿಯಿಂದ ನಡೆದಿರುತ್ತದೆ. ಅಲ್ಲಿ ಇಲ್ಲದ ಲೇಖಕರ ನಡಾವಳಿಯ ವಿಷಯವೂ ಬರುತ್ತದೆ. ಅವರೇ ಅಲ್ಲಿ ಆಗಮಿಸಿದರೆಂದರೆ ಇನ್ನೊಬ್ಬರ ವಿಷಯ! ಬಂದವರು ಹೋಗುತ್ತಾರೆ; ಹೊಸಬರು ಬರುತ್ತಾರೆ. ಆಸನಗಳು ಖಾಲಿಯಾಗುವುದೇ ಇಲ್ಲ. ಭಂಡಾರಿ ಕುಳಿತೋ-ನಿಂತೋ ಒಬ್ಬೊಬ್ಬರ ಮುಖ ನೋಡಿ ತನ್ನ ಅನುಭವಗಳನ್ನು ಹೇಳುತ್ತಿರುತ್ತಾನೆ. ನಿರಂತರವಾದ ಸಾಹಿತಿಗಳ ಸಂಪರ್ಕದಿಂದ ಅವನ ಅನುಭವದ ಒರೆ ಬಹಳ ಸೂಕ್ಷ್ಮವಾಗಿಯೆ ಇರುತ್ತದೆ. ಅವನ ವ್ಯವಹಾರದ ಮಾತಿಗೆ ಅಲ್ಲಿನ ಯಾವ ಸಾಹಿತಿಗಳೂ ಎದುರಾಡುವಂತಿಲ್ಲ.

ಇನ್ನಾವ ಕೆಲಸವೂ ಒಗ್ಗದೆ ಹಲವು ಗೆಳೆಯರ ಚರ್ಚಾಸತ್ರಕ್ಕೆ ಒಂದು ಸ್ಥಳವೆಂದೂ, ಅದರ ಮೂಲಕ ವ್ಯಾಪಾರವಿಲ್ಲದಾಗ ಬೇಸರ ಬರಬಾರದೆಂದೂ ಇವನು ಈ ಸ್ವತಂತ್ರ ಉದ್ಯಮಕ್ಕೆ ಕೈಹಾಕಿದವನು. ಸಾಹಿತಿಗಳು ತಾವು ಬರೆದ ಪುಸ್ತಕಗಳನ್ನು ಇವನಿಂದ ಸಾಧ್ಯವಿದ್ದರೆ ಅಚ್ಚು ಹಾಕಿಸಿ ಅದರ ವ್ಯವಹಾರದ ನೆಪದಿಂದ ಇವನನ್ನು ನಿತ್ಯ ಕಾಣಬರುತ್ತಾರೆ. ಇನ್ನು ಕೆಲವರು ಬೇರೆ ಪ್ರಕಾಶಕರಿಗೆ ತಮ್ಮ ಪುಸ್ತಕ ಪ್ರಕಾಶನದ ಹಕ್ಕು ಮಾರಿ 'ರಾಯಲ್ಟಿ' ಯಲ್ಲಿ ಬಂದ ಪ್ರತಿಗಳನ್ನು ಇವನಲ್ಲಿ ಇಟ್ಟು, ಮಾರಿದಂತೆ ಹಣ ಪಡೆಯುವ ಕರಾರು ಮಾಡಿಕೊಂಡಿರುವರು. ಮತ್ತೆ ಕೆಲವರು ತಾವೇ ಅಚ್ಚು ಹಾಕಿಸಿ ಇವನಿಂದ ಮಾರಾಟ ಮಾಡಬಯಸುವರು.

ಹೀಗಾಗಿ ತಾವು ಕಾರಣವಾದ ಈ ಸಾಹಿತ್ಯಪೇಟೆಗೆ ತಾವೇ ಸದಸ್ಯರಾಗಿ, ಓದುಗರು ಕೊಳ್ಳುವವರಾಗುವರೇ ಎಂಬ ಪರೀಕ್ಷೆಗೆಂದೂ ಇಲ್ಲಿ ಕೂಡಿರುವರು

ಈ ಸಾಹಿತಿಗಳು. ಇವರ ಈಸಂತೆಗೆ ಕೊಳ್ಳುವವರು ಹೆವರಿ ಮೂರ ಸಾರಿ ತಮ್ಮ
ಹಣವನ್ನು ಬೇರೆ ಅಂಗಡಿಗೆ—ಬಹುಶಃ ಉಡುಪಿ ಖಜಾನಿಗೆ–ಹಾಕುವರು.
ಪುಸ್ತಕಗಳ ವ್ಯಾಪಾರದ ಬಗ್ಗೆ ಭಂಡಾರಿಯನ್ನು ಕೇಳಿದರೆ ನೀವೆ ನೋಡು
ತ್ತೀರಲ್ಲ—ಎಂದವನು ಮುಗುಳು ನಗುವನು.

ಅಕಸ್ಮಾತ್ ಇವರನ್ನು ತಿಳಿಯದ ಒಬ್ಬ ಗಿರಾಕಿ ಬಂದು ಚರ್ಚೆ ಮಾಡಿ
ಒಂದು ಪುಸ್ತಕ ಬೆಲೆಗೆ ಬಯಸುವನು. ಆವಸಿದ್ದಾಗಲೇ ಅವನು ಕೊಳ್ಳುವ
ಪುಸ್ತಕದ ವಿಮರ್ಶೆ ನಡೆಯುತ್ತದೆ. ಅವನು ಬಿಟ್ಟು ಹೋಗುತ್ತಾನೆ. ಬದಲು
ಬೇರೊಂದು ಪುಸ್ತಕ ದಾಟಿಸಲು ಭಂಡಾರಿ ಯತ್ನಿಸಿ ನೋಡುತ್ತಾನೆ. ಗಿರಾಕಿ
ಹೋದಮೇಲೆ ನೆರೆದ ಈ ಗೆಳೆಯರಿಗೆ ‘ಗಿರಾಕಿ ಬಂದಾಗ ಚರ್ಚೆ ಕೂಡದು’
ಎಂದು ತನಗಿರುವ ಸ್ನೇಹದ ಸಲಿಗೆಯಿಂದ ಬಿನ್ನವಿಸಿಕೊಳ್ಳಬೇಕಾಗುವುದು:
‘ಹೌದು’–ಎಂದು ಒಬ್ಬ ಸಾಹಿತಿ; ‘ಪುಸ್ತಕದ ವಿಮರ್ಶೆಗಿಂತ ತಾರೀಫು ಮಾಡಿ
ದರೆ ಹೇಗೆ?’ ಎಂದೊಬ್ಬ·‘ಕೊಳ್ಳಬಂದವನ ರಸಿಕತೆಯನ್ನೇ ಕೊಂಡಾಡಬೇಕು’
ಎಂದು ಇನ್ನೊಬ್ಬ—ಹೀಗೆ ಕೊಳ್ಳುವವರ ಮೇಲೆ ಚರ್ಚೆ ತಿರುಗುತ್ತದೆ.
‘ನೀವು ಏನನ್ನೂ ಮಾಡದೆ ಕೊಳ್ಳಬಂದವರಂತೆ ಒಂದೊಂದು ಪುಸ್ತಕ
ಹಿಡಿದು ನಾಟಕ ಮಾಡಬೇಕೆಂದು.’ ಭಂಡಾರಿ ಸಲಹೆ ಕೊಡುವನು ಅದಕ್ಕೆ
ಎಲ್ಲರೂ ಸಮ್ಮತಿಸುವರು.

ಒಂದೊಮ್ಮೆ ಅಲ್ಲಿ ಇರುವ ಸಾಹಿತಿಯ ಪುಸ್ತಕ ಮಾರುತ್ತವೆ. ಗಿರಾಕಿ
ಇದ್ದಾಗ ಮಾಡಬೇಕಾದ ನಾಟಕ ಪ್ರತವನ್ನು ಕೈಕೊಂಡ ಸಾಹಿತಿವೃಂದ
ಗಿರಾಕಿ ಹಣ ಕೊಟ್ಟು, ಹೊರಕ್ಕೆ ಕಾಲಿಕ್ಕುವ ದಾರಿಯನ್ನೇ ನೋಡುತ್ತಿ
ರುತ್ತದೆ. ಭಂಡಾರಿ ಇವರ ತಾಳ್ಮೆಯ ಪರೀಕ್ಷೆಯ ಜತೆಗೆ ಗಿರಾಕಿಯ ರುಚಿ
ಪರೀಕ್ಷೆಯನ್ನು, ಅವನ ಹಣದ ಚೀಲದ ಪರೀಕ್ಷೆಯನ್ನು ಮಾಡುತ್ತ ಇನ್ನೆರಡು
ಪುಸ್ತಕ ಅವನಿಗೆ ಕಟ್ಟಲೆತ್ನಿಸುವನು. ‘ಮತ್ತೊಮ್ಮೆ’ ಎಂದು ಗಿರಾಕಿ
ತಪ್ಪಿಸಿಕೊಳ್ಳುವನು. ಅವನು ಹೊರಟಿದ್ದೇ ತಡ—ಒಳಗೆ ಕೋಲಾಹಲವೇ
ಳುತ್ತದೆ. ಮಾರಾಟವಾದ ಪುಸ್ತಕ ಕರ್ತೃ ಕನಸಿನಿಂದ ಇಹಲೋಕಕ್ಕೆ
ಇಳಿದಂತೆ ‘ಏನು ವಿಶೇಷ?’ ಎನ್ನುತ್ತಾನೆ. ಒಬ್ಬ ಅವನ ಜನಪ್ರಿಯತೆಯನ್ನು
ಹೊಗಳುತ್ತಾನೆ. ಇನ್ನೊಬ್ಬ ನೇರವಾಗಿ ‘ಚಹಾ ಆಗಲಿ’ ಎನ್ನುತ್ತಾನೆ.
ಭಂಡಾರಿಯ ಕೈಗೆ ಬಂದ ದುಡ್ಡು ಯಾವ ಲೆಕ್ಕಕ್ಕೇ ಆಗಲಿ. ಮತ್ತೆ ಕೈಬಿಡು

ತ್ತದೆ. ಅಂದು ಇಂಥ ಮಾರುವ ಪುಸ್ತಕಗಳ ನಿರ್ಮಾಣ. ಓದುಗರ ಸಂಸ್ಕೃತಿಯ ಮಟ್ಟದ ಬಗ್ಗೆ ಚರ್ಚೆಯಾಗಿ, ವಿಮರ್ಶೆಗಳಿಂದ ಆ ಪುಸ್ತಕಕ್ಕೆ ಬಂದ ಜಾಹಿರಾತನ್ನು ವ್ಯಾಪಾರಿ ನೆನಪಿಸಿದ ಮೇಲೆ ಮತ್ತೆ ಎಲ್ಲರೂ 'ಸ್ಟೈ' ಎಂದು ಚಪರುತ್ತಾರೆ. ಹೋಗುವಾಗ ಎಲ್ಲರೂ ಒಂದೊಂದು ಪ್ರತಿ ಅಂಥ ಬಂದ ಹೊಸ ಪುಸ್ತಕ ಹಿಡಿದುಕೊಂಡು ಹೋಗುವರು. ಮರುದಿನ ಓದಿ ಒಂದಿಬ್ಬರು ತಿರುಗಿ ತರುವರು. ಒಬ್ಬಿಬ್ಬರು ಓದಲಾರದೆ, ಓದಿದರಾಯಿತೆಂದು ತಮ್ಮ ರಾಶಿಯಲ್ಲಿ ಎಸೆದಿರುವರು. ತಿರುಗಿ ಆ ಪುಸ್ತಕ ಸ್ನೇಹಿತ ಭಂಡಾರಿಯನ್ನು ಸೇರೀತೆಂಬ ಭರವಸೆಯಿಲ್ಲ. ಮರುದಿನದಿಂದಲೇ ಅಂಥ ಪುಸ್ತಕಗಳ ಚರ್ಚೆಯೂ ಭಂಡಾರದಲ್ಲಿ ಮತ್ತೆ ನಡೆಯುವುದು.

'ಶುಕಸಪ್ತತಿ' ಗಿರಾಕಿಗಳು ದಿನಾ ಬಂದು ಹೋಗುವರು. ಗಳಗನಾಥ, ವೆಂಕಟಾಚಾರ್ಯರ ಇಲ್ಲದ ಪುಸ್ತಕಗಳನ್ನು ಕೇಳಿಹೋಗುವವರು ಕೆಲವರು! ಇಷ್ಟ ಪ್ರಗಳಲ್ಲಿ ಅನೇಕಪುಸ್ತಕಗಳನ್ನು ನೋಡಿ 'ಬೆಲೆಜಾಸ್ತಿ' ಎಂದು ಬಿಟ್ಟು ಹೋಗುವವರು! 'ಬೆಲೆ ಹೇಗೆ ಉಚಿತ?' ಎಂಬ ಬಗ್ಗೆ ಭಂಡಾರಿ ಸದ್ಯದ ಆರ್ಥಿಕ ಪರಿಸ್ಥಿತಿಯ ಮೇಲೆ ಚಿಕ್ಕದೊಂದು ಉಪನ್ಯಾಸಮಾಡಿ ಕಾಗದ, ಮುದ್ರಣಗಳ ದರ ಮತ್ತು ತರಗತಿಯ ಬಗ್ಗೆ ಹೇಳಿ ಗಿರಾಕಿಗಳಿಂದ ಪುಸ್ತಕದ ಬೆಲೆಯನ್ನು ಒಪ್ಪಿಸುವನು. ಅವರು 'ಅದೆಲ್ಲಾ ಸರಿ; ನಮಗೆ ೫ ರೂಪಾಯಿಯಲ್ಲಿ ಹನ್ನೆರಡು ಪುಸ್ತಕ ಬರಬೇಕು' ಎನ್ನುತ್ತಾರೆ. ಆಗ ಮತ್ತೆ ಆ ದರದ ೨೫ ಪುಸ್ತಕಗಳನ್ನು ತೆಗೆದು ತೋರಿಸಿದಾಗ ಒಂದರ್ಥ ವ್ಯಾಪಾರವಾಗುವುದು.

ಲೈಬ್ರರಿಯವರು ಯಾರಾದರೂ ಬಂದರಾತೂ ಭಂಡಾರಿ ಮೊದಲೇ ಚಹಾದ ವ್ಯವಸ್ಥೆ ಮಾಡಿ ಅವರನ್ನು ಪ್ರಶಸ್ತವಾಗಿ ಕೂಡಿಸಿ ಒಂದೊಂದೇ ಪುಸ್ತಕ ಎತ್ತಿ— ಅವುಗಳನ್ನು ಓದಿದ್ದಕ್ಕಿಂತ ಹೆಚ್ಚಾಗಿ ಅವುಗಳ ವರ್ಣನೆ ಮಾಡಿ— ಪುಸ್ತಕವೆಂದರೆ ಹೂವಿನಂತೆ. ಅಂತೆಯೇ ಅನೇಕ ನಾಲಿಗಳು ಹುಟ್ಟಿಕೊಂಡಿವೆಯೆಂದು ಹೇಳಿ, 'ಹೂ'-'ಬಂದರೊಲು ಬಂದಿಲ್ಲಿ, ಒಂದರೊಳು ಕುಂದಿಲ್ಲ' ಎಂದು ಬೇಂದ್ರೆಯವರ ಕವಿತೆ ಹಾಡಿ ಒಂದು ರಾಶಿ ಪುಸ್ತಕದ ಗುಡ್ಡ ಹಾಕುವನು. ಅವರೆಲ್ಲಾ ಕೇಳಿ, ನೋಡಿ 'ಒಂದು ಪುಸ್ತಕಗಳ ಪಟ್ಟಿ ಇದ್ದರೆ ಕೊಡಿ; ನಾನು ಕಮಿಟಿಯ ಮುಂದೆ ಇಟ್ಟು ಒಪ್ಪಿಗೆ ಪಡೆದು ನಿಮಗೆ ಆರ್ಡರು ಕೊಡುತ್ತೇನೆ' ಎನ್ನುತ್ತಾರೆ. ಅದಕ್ಕೇನು, ಇದ್ದ, ಇಲ್ಲದ, ಇರಬಹುದಾದ. ಸಿಕ್ಕಲಾರದ ಪುಸ್ತಕಗಳ ಕ್ರಯಪಟ್ಟಿಯೊಂದು ಭಂಡಾರಿಯಲ್ಲಿ

ಸಿದ್ಧವೇ ಇರುತ್ತದೆ; ಅದನ್ನೆತ್ತಿಕೊಂಡು ಅವರು ಗಂಭೀರವಾಗಿ ಹೊರ ಹೋ ಗುತ್ತಾರೆ. ಭಂಡಾರಿ ಸುಸ್ತಾಗಿ ಹರಡಿದ ಪುಸ್ತಕ ಇರಿಸುವುದಕ್ಕೂ ಸಾಕಾಗಿ ಮತ್ತೊಂದು ಕಪ್ಪು ಚಹಾ ಕುಡಿದುಬಂದು 'ವಾಚನಾಲಯಗಳ ಚಳವಳಿ' ಯನ್ನು ಕುರಿತು ಒಂದು ಲೇಖನ ಬರೆದು ಸಂಜೆ ಬರುವ ಸಾಹಿತಿಗಳ ಮುಂದಿಡುತ್ತಾನೆ.

ಕನ್ನಡದಲ್ಲಿ ಅನೇಕ ಮಾಲೆಗಳು ಹುಟ್ಟಿಕೊಂಡಿವೆಯಷ್ಟೆ! ಅದರ ಸಂಚಾಲಕರಿಗೆ ಕನ್ನಡ ಓದುವ ಸಣ್ಣ ಪರಿಮಿತಿಯ ರಸಿಕರದೆಲ್ಲಾ ಗೊತ್ತು. ಕನ್ನಡ ಅಕ್ಷರಸ್ಥ ಒಂದಿಲ್ಲ ಒಂದು ಮಾಲೆಗೆ ಚಂದಾದಾರನಾಗದೆ ವಿಧಿಯಿಲ್ಲ. ಮಾಲೆಗಳ ವ್ಯಾಪ್ತಿ ಅಷ್ಟು ಬೆಳೆದಿದೆ. ೫ ರೂ. ಚಂದಾದಲ್ಲಿ ೧೦ ರೂ. ಬೆಲೆಯ ಪುಸ್ತಕ ಬರುತ್ತದೆಂದು ಚಂದಾದಾರರಾದ ಕೆಲವರು ಈ ಭಂಡಾರಿ ಯನ್ನು ಕಂಡು ಆರು ರೂಪಾಯಿಗೆ ತಮ್ಮ ಚಂದಾ ಪುಸ್ತಕಗಳನ್ನು ಮಾರಿ ಕೊಳ್ಳಬಯಸುತ್ತಾರೆ. ೫ ರೂ. ಗೆ ತಾನೇ ಚಂದಾದಾರನಾಗದ ಈ ಭಂಡಾರಿ ೬ ರೂ. ಯ ಈ ಹೊಸ ಚಂದಾಕ್ಕೆ ಒಪ್ಪಿ ತನ್ನ 'ಜಾಣ' ತನಕ್ಕೆ ತಾನೇ ನೊಂದುಕೊಳ್ಳುತ್ತಾನೆ.

ಒಬ್ಬ ನಾಟಕ ಪ್ರಕಾಶಕನಲ್ಲಿ ಈ ಸಾಹಿತ್ಯ ಭಂಡಾರಿ ಒಮ್ಮೊಮ್ಮೆ ಸುಖಸಂಕಥಾವಿನೋದಕ್ಕಾಗಿ ಹೋಗುವುದುಂಟು. ಅಲ್ಲಿ ಬಂದ 'ಹಲ್ಲೀ ಶಕುನ'ದ ಗಿರಾಕಿಗೆ ಆ ನಾಟಕ ಪ್ರಕಾಶಕ ನಮ್ಮಲ್ಲಿ 'ಸಾಹಿತ್ಯ ಪುಸ್ತಕ' ಗಳಿಲ್ಲವೆನ್ನುತ್ತಾನೆ. ಗಿರಾಕಿ 'ಹಲ್ಲೀಶಕುನ ಬೇಕು—ನನಗೆ ಸಾಹಿತ್ಯ ಬೇಡ' ಎಂದರೆ 'ಅದೇ ಸಾಹಿತ್ಯ; ನಮ್ಮಲ್ಲಿ ಬರೇ ನಾಟಕಗಳೇ ಇರುವುದು' ಎಂದಾಗ ಈ ಸಾಹಿತ್ಯಭಂಡಾರಿ ಮೂರ್ಛೆಯಿಂದ ತಪ್ಪಿಸಿಕೊಳ್ಳಲು ನಸ್ಯ ಏರಿಸಬೇಕಾ ಗುವುದು. ಆ ಪ್ರಕಾಶಕ ಈ ಭಂಡಾರಿಯಲ್ಲಿದ್ದ ನಾಟಕಗಳನ್ನೆಲ್ಲ ಅರ್ಧ ಬೆಲೆಗೆ ಕೊಳ್ಳಬಯಸುತ್ತಾನೆ. 'ನಾಟಕಗಳೂ ಸಾಹಿತ್ಯ' ಎಂದು ಭಂಡಾರಿ ಅವನಿಗೆ 'ತಿಳಿ' ಹೇಳಿದಾಗ ಅವನು ನಾಟಕಪ್ರಕಾಶನವನ್ನೂ ಬಿಟ್ಟು ಮುದ್ರಣಾಲಯ ತೆರೆದು ತನ್ನ ನಾಟಕಗಳನ್ನೂ ಈ ಭಂಡಾರಿಯ ತಲೆಗೆ ಕಟ್ಟಲೆತ್ನಿಸುತ್ತಾನೆ. 'ಯಾಕೆ?' ಎಂದು ಭಂಡಾರಿ ಕೇಳಿದರೆ

ಸಾಹಿತ್ಯಕ್ಕೆ 'ಲಕ್ಷ್ಮಿ'ಯ ಶಾಪವಿದೆ ಎಂಬ 'ನಿತ್ಯಸತ್ಯ' ವನ್ನು ಸಾರುತ್ತಾನೆ!

೩

ಒಂದೊಮ್ಮೆ ಈ ಭಂಡಾರಿ ಕುಳಿತಲ್ಲಿ ವ್ಯಾಪಾರವಾಗುವುದಿಲ್ಲವೆಂದು ಸಂಚಾರ ಹೊರಡುವುದೂ ಉಂಟು. ಆಗ ಸ್ನೇಹಿತ ಸಾಹಿತಿಗಳು ಇವನಿಗೆ ಶುಭ ಕೋರಿ, ಮನೆಗೆ ಕರೆದು ಆತಿಥ್ಯ ಮಾಡಿ ಬೇಗ ಬರುವಂತೆ ಕೇಳಿಕೊಳ್ಳುತ್ತಾರೆ. ಭಂಡಾರ—ಅದರಲ್ಲಿ ನೀವು ಇಲ್ಲವಾದರೆ ನಮಗೆ ಜೀವವೇ ಇಲ್ಲದಾಗುತ್ತದೆಂದು ಹೇಳಿ ತಮ್ಮ ಮನೆಯಲ್ಲಿ ಉಳಿದ ಮತ್ತೆ ಕೆಲವು ಪುಸ್ತಕ ಮಾರಿಕೊಂಡು ಬರಲು ಕೊಟ್ಟು ಕಳಿಸುತ್ತಾರೆ. ಸ್ಟೇಶನ್ನಿಗೂ ಬಂದಿಷ್ಟು ಹೋಗಿ ಬೀಳ್ಕೊಡುತ್ತಾರೆ.

ಸಂಚಾರದಲ್ಲಿ ಮನೆ-ಮನೆ, ಶಾಲೆ, ಕಾಲೇಜು—ಲೈಬ್ರರಿ ಹೀಗೆಲ್ಲ ಕಡೆಗೆ ಪುಸ್ತಕಗಳನ್ನು ಹೊತ್ತುಕೊಂಡು ಹೋಗಿ, ಒಮ್ಮೆ ಅಲ್ಲದೆ ಮತ್ತೊಮ್ಮೆ ಗಂಟುಬಿದ್ದು ರೊಕ್ಕ ಇಲ್ಲವಾದರೆ ಉದ್ದರಿಗೆ ದಸ್ತ್ಯವ್ಯ ಹಾಕುತ್ತಾನೆ ಈ ಭಂಡಾರಿ. ಪುಸ್ತಕದ ಭಾರ ಹೊತ್ತು ದಣಿದಾಗ ಕಮಿಟಿಯ ನೆಪ ಮುಂದೆಮಾಡಿದ ಲೈಬ್ರರಿಯಲ್ಲಿ 'ಒಪ್ಪಿಗೆಗಾಗಿ' ಎಂದು ಪಟ್ಟಿಯನ್ನೂ ಪುಸ್ತಕವನ್ನೂ ಇಟ್ಟು ಉಸ್ಸೆಂದು ಬಂದು ತಾನಿಳಿದ ಹೋಟಲು ಸೇರುವನು. ಅಲ್ಲಿ ಸೇರಿದ ಎಳೆಯ ಬರೆಹಗಾರರು ಇವನನ್ನೂ ಇವನ ಚೀಲವನ್ನೂ ನೋಡಿ ಗುರುತಿಸಿ ತಮ್ಮ ಬರಹಗಳನ್ನು ತೋರಿಸಲು ಇವನಿಗೆ ಗಂಟುಬೀಳುವರು. ತನ್ನ 'ರೂಂ'ಗೆ ಅವರನ್ನು ಬರಮಾಡಿಕೊಂಡು 'ಬರೆಯುವ ಮೊದಲು ಓದಬೇಕು-ಓದ ಬೇಕಾದರೆ ಪುಸ್ತಕಗಳನ್ನು ಕೊಳ್ಳಬೇಕು.' ಎಂದು ಕನ್ನಡ ಸಾಹಿತ್ಯದ ಅಂದಿನ ಎತ್ತರ, ಇಂದಿನ ನಿಲವುಗಳ ಬಗ್ಗೆ ಚಿಕ್ಕ ಉಪನ್ಯಾಸವಿತ್ತು ಅವರಿಗೆ ಕೆಲವು ಪುಸ್ತಕ ಮಾರುವನು. ಅವರು ಇವನ ವಿಳಾಸ ಪಡೆಯುತ್ತಾರೆ ಇವನು ಊರಿಗೆ ಮರಳುವ ಮೊದಲೇ ಅವರ 'ಹಸ್ತಪ್ರತಿ'ಗಳು ಇವನ ಬರವಿಗಾಗಿ ಕಾತರದಿಂದ ಕಾದಿರುತ್ತವೆ.

ಪರವೂರಿನಲ್ಲಿ ಅಲೆಯುವಾಗ ಒಂದೊಂದು ಸಂಸ್ಥೆಯವರು ಚರ್ಚೆ ಮಾಡಿ ಈ ಭಂಡಾರಿಯಿಂದ ಕಮಿಶನ್ ಕತ್ತರಿಸುವುದೂ ಉಂಟು. ಸಂಸ್ಥೆಗೆ

ಬಿಲ್ಲಿನಲ್ಲಿ ಕಮಿಶನ್ನು ಇಲ್ಲದೆ 'ಸ್ವಂತ'ಕ್ಕೆಂದು ಬಾಯಿಲಿಕ್ಕುವ ಕಮಿಶನ್ನನ್ನು ಕೆಲವರು ಯಾಚಿಸುವುದೂ ಉಂಟು. ಅಲ್ಲದೆ ತಮ್ಮಲ್ಲಿರುವ ಹಳೆ-ಹೊಸ ಪುಸ್ತಕಗಳಿಗೂ ಇವನಿಂದ ಬಿಲ್ಲು ಬರೆಸಿಕೊಂಡು ರೊಕ್ಕ ಮಾಡಿಕೊಳ್ಳುವುದೂ ಉಂಟು. ಪುಸ್ತಕ ಮಾರಾಟ ಒಂದು ಉದ್ಯಮವಾಗಬೇಕೆಂಬ ಈ ಭಂಡಾರಿ ಇವಕ್ಕೆಲ್ಲಾ ಸೋತು ನಡೆಯಬೇಕಾಗುವ ಸಂದರ್ಭ ಬಾರದಿರುವುದಿಲ್ಲ.

ಊರೂರು ಅಲೆಯುವಾಗ ಕೆಲವು ಕಾಂಗ್ರೆಸ್ ಭಕ್ತರು ಸಿಕ್ಕುತ್ತಾರೆ. 'ಸದ್ಯದ ಪರಿಸ್ಥಿತಿ' ಅವರ ಏಕಮೇವ ವಿಷಯ. ಆಗ ಭಂಡಾರಿ ಸದ್ಯದ ಸಾಹಿತ್ಯ ಬಿಟ್ಟು ಸದ್ಯದ ಪರಿಸ್ಥಿತಿಯ ಬಗೆಗೂ ಮಾತನಾಡಬೇಕಾಗುತ್ತದೆ. ಗಾಂಧೀ ಜಯಂತಿ, ಸ್ವಾತಂತ್ರ್ಯದಿನೋತ್ಸವಗಳಿದ್ದರೆ ಇವನು ಭಾಷಣವನ್ನು ಕೊಡಬೇಕಾಗುತ್ತದೆ. ಆಗಲೂ ಇವನು ತನ್ನ ಕರ್ತವ್ಯವೆಂದು ಗಾಂಧೀ ಸಾಹಿತ್ಯದ ಬಗ್ಗೆ ಹೇಳುತ್ತ, ಕನ್ನಡದಲ್ಲಿರುವ ಗಾಂಧೀ ಸಾಹಿತ್ಯದ ಬೆಳವಣಿಗೆಯನ್ನು ಹೇಳಿ, ತನ್ನ ಚೀಲದಿಂದ ಒಂದೊಂದನ್ನೆ ತೆಗೆದು, ಅದರಲ್ಲಿಯ ಅವತರಣಿಕೆಗಳನ್ನು ಓದುತ್ತ ಅವನ್ನು ಕನ್ನಡಿಸಿದವರ ಸಾಹಿತ್ಯಸೇವೆಯನ್ನು ಕೊಂಡಾಡಿ, ಅಂಥ ಪುಸ್ತಕಗಳ ಪ್ರಚಾರದ ಆವಶ್ಯಕತೆಯನ್ನು ಹೇಳಿ. ತಾನು ಅಂಥ ಕಾರ್ಯ ಕೈಕೊಂಡು ಮಾಡಿದ ಸೇವೆಯನ್ನು ನಿವೇದಿಸಿಕೊಳ್ಳುವುದೂ ಇವನ ಸದ್ಯಸ್ಥಿತಿಯ ಭಾಷಣದ ಅಂಗವಾಗುತ್ತದೆ. ಆ ಕಾಲಿನಲ್ಲಿಯೇ ಒಂದಿಷ್ಟು ವ್ಯಾಪಾರವಾಗಿ ಇವನನ್ನು ಆಮಂತ್ರಿಸಿದ ಕಾಂಗ್ರೆಸ್ ಭಕ್ತನಿಗೆ ಗಾಬರಿಯಾಗುತ್ತದೆ. ಆಗ ಇವನಿಗೂ ಅವನಿಗೂ ರಾಜಕಾರಣದ ಚರ್ಚೆಯಾಗಿ ತಾನು ಸಂಸ್ಕೃತಿಯ ಪ್ರಸಾರಕನೆಂದು ಹೇಳಿ. ಕೋರ್ಟು, ಕಚೇರಿ, ಪರ್ಮಿಟ್ಟು ಮುಂತಾದ ಅವರ ಅಧಿಕೃತ ಚಟುವಟಿಕೆಗಳ ಕಡೆಗೆ ತಾನು ಹಾಯುವದಿಲ್ಲವೆಂದೂ ತನ್ನದು 'ಚಿರಾತನ ಶಾಂತಿ' ಕಾರ್ಯವೆಂದೂ ಹೇಳಿ ಕಾಂಗ್ರೆಸ್ ಜನವನ್ನು ರಮಿಸುವನು. 'ಇವನ ಸಾಹಿತ್ಯ-ಇವನೂ ಸಾಯಲಿ. ನಮ್ಮ ಇಲೆಕ್ಷನ್ ಸಮಯ ಇವನನ್ನು ಪ್ರಚಾರಕ್ಕೆಳೆಯಬೇಕೆಂದು' ಯೋಚಿಸಿ ಕಾಂಗ್ರೆಸ್ಸಿಗ ಊರ ವ್ಯಾಪಾರಸ್ಥರಲ್ಲಿ ಇವನಿಗೊಂದು 'ಪಾರ್ಟಿ' ಮಾಡಿಸಿ ಬಿಡುತ್ತಾನೆ.

ವ್ಯಾಪಾರಸ್ಥರ ಪೇಟೆಗೆ ಈ ಸಾಹಿತ್ಯಭಂಡಾರಿ ಹೋಗುವುದು ಅಪರೂಪ. ಈ ಸಂಧಿ ದೊರೆತುದನ್ನು ಉಪಯೋಗಿಸಿಕೊಳ್ಳಬೇಕೆಂದು ಅಲ್ಲಿಯೂ

ತನ್ನ ಚೀಲ ತುಂಬಿ ಹೋಗುತ್ತಾನೆ. ಆದರೆ ಅವರು ಸಂಸ್ಥೆಗಳಿಗೆ ತೆತ್ತ ಚಂದಾ ಪಟ್ಟಿಯನ್ನು ಇವನಿಗೆ ಒಪ್ಪಿಸುತ್ತಾರೆ. 'ವಾಗ್ಮಿನ' ಗಳ ಗತಿ ಯನ್ನರಿತ ಇವನು ಅವರ ವಾಕ್ಚಾತುರ್ಯವನ್ನು ಮೆಚ್ಚಿ ತನ್ನ ವ್ಯಾಪಾರದ ಬಗ್ಗೆ ಒಂದಿಷ್ಟು ಮುದುಡಿಕೊಂಡು ಕನ್ನಡ ಸಾಹಿತ್ಯಕ್ಕೆ "ಇಂಥ ವ್ಯಾಪಾರ" ಯಾವಾಗ ಬಂದೀತೆಂದು ಚಿಂತಿಸುತ್ತಾನೆ. ಆದರೆ ಈ ವ್ಯಾಪಾರಸ್ಥರ ಕೇಂದ್ರೀ ಕೃತಲಾಭ ದೃಷ್ಟಿಗೆ ಹೇಸಿಕೊಳ್ಳುತ್ತಾನೆ. ಮತ್ತೆ ತನ್ನ ವ್ಯಾಪಾರದ ಬಗ್ಗೆ ಅಭಿಮಾನ ತಾಳಿ ಅವರಿಗೆ ಕೆಲವೊಂದು ಪುಸ್ತಕಗಳ ಬಗ್ಗೆ ಹೇಳಿ ಮಾರ ಲೆತ್ನಿಸುತ್ತಾನೆ. ಅಲ್ಲಿ ಸಾಹಿತ್ಯದ ವ್ಯಾಪಾರ ನಡೆಯುವದಿಲ್ಲ 'ಧರ್ಮ'ದ ಪುಸ್ತಕಗಳನ್ನು ಕೆಲವರು ಕೇಳುತ್ತಾರೆ. ಇವೆಲ್ಲ ನಮ್ಮ ಸಮಾಜ ಧರ್ಮವನ್ನು ಕುರಿತೇ ಬರೆದದ್ದೆಂದು ಹೇಳುತ್ತಾನೆ. ಅಲ್ಲಿ ಇವನ ಮಾತಿನ ನಾಣ್ಯ ನಡೆ ಯುವುದಿಲ್ಲ. ಮತ್ತೆ ತನ್ನ ರೂಮಿಗೆ ಓಡಿ ಕೆಲವು ಧರ್ಮದ ಹೆಸರಿನ ಪುಸ್ತಕ ತರುತ್ತಾನೆ. ಅವರು ಕೇಳಿದ ಧರ್ಮ ಕಾಣದೆ ಬಹಳ ನಿರಾಶೆಗೊಳ್ಳುತ್ತಾನೆ. ಅವರು "ಚಂದಾ ತಕ್ಕೊಳ್ಳಿರಿ—ಪುಸ್ತಕ ಬೇಡ" ಎನ್ನುತ್ತಾರೆ. ಇವನಿಗೆ ಈ ಧರ್ಮಸ್ವೀಕಾರದ ಧೈರ್ಯವಾಗದೆ ತನ್ನ ಚೀಲ ಹೊತ್ತು ಹೊರಡು ತ್ತಾನೆ. ಇವನ 'ಮೂರ್ಖ' ತನಕ್ಕೆ ಕಾಂಗ್ರೆಸ್ಸಿಗ ನಗುತ್ತಾನೆ. ವ್ಯಾಪಾ ರಸ್ಥರು ತಮ್ಮ ಜಾಣತನಕ್ಕೆ ಹೆಮ್ಮೆ ತಾಳುತ್ತಾರೆ.

ಹೀಗೆ ಸಂಚಾರದಲ್ಲಿ ಅನೇಕ ಬಗೆಯ ಅನುಭವದಿಂದ ಸಾಹಿತ್ಯದ ಬಗ್ಗೆಯೂ ಅವನಿಗೆ ಜಿಗುಪ್ಸೆ ಉಂಟಾಗುತ್ತದೆ ಬರೆವವರ ಯೋಗ್ಯತೆ ಯನ್ನು ಅಳೆಯಲೆತ್ನಿಸುತ್ತಾನೆ. ತನ್ನ ಸ್ನೇಹಿತರನ್ನು ನೆನಸಿ ಪಾಪ! ಎನ್ನು ತ್ತಾನೆ. ದಾರಿಯ ಪಟ್ಟಣಗಳಲ್ಲಿ ದೊಡ್ಡ ಸಾಹಿತಿಗಳನ್ನು ಕಾಣ ಹೋದಾಗ ಅವರು ತಮ್ಮ ಕೃತಿಗಳ ಅವತರಣಿಕೆಯಲ್ಲಿಯೇ ಮಾತಾಡುವವನ್ನು ನೋಡಿ—ಏನು? ಎನ್ನಬೇಕಾಗುವದು. ಇದು ನನ್ನ ಇಂಥ ಪುಸ್ತಕದಲ್ಲಿ ಯದು-ಆ ಪುಸ್ತಕದಲ್ಲಿಯದು ಎಂದಾಗ ಇವನ ತಲೆ ಸುತ್ತಿದಂತಾಗಿ 'ನಾನು ಪುಸ್ತಕ ಓದುವುದನ್ನು ಬಿಟ್ಟಿದ್ದೇನೆ' ಎನ್ನುತ್ತಾನೆ. ಆಗ ಆ ವಿಖ್ಯಾತ ಲೇಖಕ 'ಯಾಕೆ?' ಎಂದು ಕೇಳಲು "ನಾನು ಪ್ರಾಮಾಣಿಕ ಓದುಗ. ನಾನು ಓದಿದ ಕನ್ನಡ ಪುಸ್ತಕ ನಾನೇ ಮಾರಲು ಸಮರ್ಥನಾಗಿಲ್ಲ. ಆದ್ದರಿಂದ ಓದದೆ ಪುಸ್ತಕ ಮಾರುವುದು ಸುಲಭ." ಎಂದಾಗ ಆ ಸಾಹಿತಿ ಆವೇಶ ಹೊಂದಿ ಒಳಕ್ಕೆ ಹೋದವನು ತಿರುಗಿ ಬರುವುದೇ ಇಲ್ಲ.

೪

ವರ್ಷಕ್ಕೊಮ್ಮೆ ಬರುವ ಸಾಹಿತ್ಯ ಸಮ್ಮೇಳನಗಳಿಗೆ ಇಂಥ ಭಂಡಾರಿಗಳು ಹೋಗದೆ ಕಳೆಯಲೇಕಟ್ಟದು. ಅಲ್ಲಿಯ ಜಡಿಮಳೆಯ ಭಾಷಣಗಳ ಪ್ರತಿಗಳನ್ನು ಮಾರಬೇಕು. ಜತೆಗೆ ಅಕ್ಕೆ ಇಟ್ಟುಕೊಂಡ ಒಂದಿಬ್ಬರು ಸ್ಥಳೀಯ ಸಾಹಿತಿಗಳನ್ನು ಕರೆದುಕೊಂಡು ಹೋಗಬೇಕಾಗುವುದು. ಅಲ್ಲಿ ಹಚ್ಚಿದ ಇವರ 'ಸರಸಮ್ಮನ ಸಮಾಧಿ'ಯನ್ನು ಕಾಯಲು ಈ ಸಾಹಿತ್ಯಮಿತ್ರರು ಉಪಯೋಗ ಬೀಳುವರು. ಆದರೆ ಅಲ್ಲಿ ನೆರೆದ ಸಾಹಿತ್ಯ ಸಂತೆಯಲ್ಲಿ ಒಂದಿಷ್ಟು ವ್ಯಾಪಾರವಾದರೆ. ಪುಸ್ತಕಪ್ರಿಯರು ಕೆಲವರು ನೋಡ ನೋಡುತ್ತ ಪುಸ್ತಕ ಕೈಲಿ ಹಿಡಿದೇ ಹೊರಡುವರು. ಅಲ್ಲಿ ತೆರೆದ ಹತ್ತಾರು ಅಂಗಡಿಗಳಲ್ಲಿ ಎಲ್ಲಿ ಯಾದರೂ ಕೊಂಡಿರಬಹುದೆಂದು ಸುಮ್ಮನಾಗಬೇಕಾಗುವದು ಈ ಭಂಡಾರಿ. ಸಂಜೆ ಅಧಿವೇಶನ ಮುಗಿದು ಭಂಡಾರಿಗಳೆಲ್ಲ 'ಸಮಾಧಿ' ಇಳಿಸಿ. ಮಲಗುವಾಗ ವ್ಯಾಪಾರದ ಲೆಕ್ಕ ಪ್ರತಿಯೊಬ್ಬರದೆಷ್ಟೆಂದು ಚರ್ಚಿಸುವರು. ಪುಸ್ತಕ ಎಣಿಸಿದಾಗ 'ಹಿಡಿದೊಯ್ದ' ಪುಸ್ತಕದ ಮಾರಾಟ ಯಾರಲ್ಲಿ ಆಯಿತೆಂದು ಚರ್ಚಿಸಿದಾಗ ಆ ಪುಸ್ತಕವೇ ಹಣಕ್ಕೆ ಮಾರಿಲ್ಲವೆಂದು ಕಂಡು ಬರುವುದು. ಕನ್ನಡ ಸಾಹಿತ್ಯದಲ್ಲಿ ಕದ್ದು ಬರೆದದ್ದೂ ಇರುವಾಗ ಓದುಗರಲ್ಲಿ ಕದ್ದು ಓದುವವರಿರಬೇಡವೇ? ಎಂದೊಬ್ಬ ಭಂಡಾರಿ ಹೇಳುವನು. ಒಯ್ದವ ಓದುಗನೋ—ಲೇಖಕನೋ ಎಂಬ ಚರ್ಚೆಯಾಗಿ ಈಗ ಓದುಗ. ಲೇಖಕ ಎಂಬ ಭೇದಭಾವ ಕೂಡದೆಂದೂ ಎಲ್ಲಾ ಓದುಗರು ಲೇಖಕರೇ ಎಂದೂ ತೀರ್ಮಾನವಾಗಿ ಅವನು ಭೌತಿಕ ಪುಸ್ತಕವನ್ನೇಕೆ ಕದಿಯಬೇಕು ಎಂದಾಡಿಕೊಳ್ಳುವರು. ಸಾಹಿತಿಗಳಿಗೆ ಮರೆವು ಜಾಸ್ತಿ. ನಾಳೆ ತಂದು ಕೊಡುತ್ತಾನೆಂದು ಇನ್ನೊಬ್ಬ ಸಮಾಧಾನ ಹೇಳಿದರೆ 'ಅದು ನಾಟಕ' ಎಂದು ಇನ್ನೊಬ್ಬ ವಾದಿಸುತ್ತಾನೆ. ಆಗ ರಾತ್ರಿಯ ವಿವಿಧ ವಿನೋದಾವಳಿ—ನಾಟಕ ನಡೆದಿರುತ್ತದೆ. ಸಾಹಿತಿ ಯಾಕೆ ಕದಿಯಬೇಕು? ಅವನಿಗೆ ಯಾವುದಾದರೂ ಭಂಡಾರಿ ಧರ್ಮಕ್ಕೆ ಓದಲು ಕೊಡುವುದಿಲ್ಲವೇ? ಎಂದೊಬ್ಬ ಅನ್ನುವನು. 'ಪುಸ್ತಕ ಕೊಳ್ಳುವ ಭಂಡಾರ'ವೆಂದು ನಾಳೆ ಒಂದು ಬೋರ್ಡ್ ಹಾಕಿರಿ—ಅಂದರೆ ಪುಸ್ತಕ ಕಳ್ಳ ಸಿಗುತ್ತಾನೆಂದು ಒಬ್ಬ ಹಳೆಯ ಭಂಡಾರಿ ನಿರ್ಣಯ ಕೊಟ್ಟಾಗ ದಣಿದ ಭಂಡಾರಿಗಳು ನಿದ್ದೆ ಹೋಗುತ್ತಾರೆ.

ಅಂಥ ಜೀವನ ವ್ಯಾಪ್ತಿಯನ್ನು ಪಡೆದ ಸಾಹಿತ್ಯ ಭಂಡಾರಿ ತಾನೂ ಅರ್ಧ ಸಾಹಿತಿಯೇ ಆಗಿ ಬರುವ ಹಣದ ಲೆಕ್ಕವಿಡದೆ ಕೊಡುವ ಲೆಕ್ಕದ ಚಿಂತೆಯಲ್ಲಿ ಸಣ್ಣಾಗುವನು ಇವನ ಅಂಗಡಿಯ ಖ್ಯಾತಿಗೆ ಸರಕಾರೀ ಟ್ಯಾಕ್ಸುಗಳ ದಾಳಿಯಾಗಿ ಇವನ ಲೆಕ್ಕವಲ್ಲಿಯೇ ಇವನನ್ನು ಹಿಡಿಯುವರು. ಈ ವ್ಯವಹಾರ ಬಿಡಬೇಕೆಂದರೆ ಆದ ಸಾಲ, ಇದ್ದ ಪುಸ್ತಕ ತೀರದೇ ಹುಡುಲು ಬಿದ್ದು ಒದ್ದಾಡುವನು. ಮತ್ತೆ ಇವನಿಗೆ ಸಾಹಿತಿಗಳ ಒಡನಾಟದಿಂದಾಗಿ ಇನ್ನಾವ ಕೆಲಸವೂ ಹತ್ತುವ ಲಕ್ಷಣ ಕಾಣದೆ ಮತ್ತೆ ನವಪ್ರತಿಜ್ಞಾಬದ್ಧನಾಗಿ ಅದೇ ಅಂಗಡಿಯಲ್ಲಿ ಕೂಡುವ ಸ್ಥಳದಲ್ಲಿ ಕಪಾಟು ಇಟ್ಟು—ಕಪಾಟಿನ ಸ್ಥಳದಲ್ಲಿ ಆಸನಹಾಕಿ ಮತ್ತೆ ವ್ಯಾಪಾರ ತೊಡಗುತ್ತಾನೆ.

# ಶನಿವಾರ

ಸ್ಟೇಶನ್ ಮಾಸ್ತರ ಬಾಬೂರಾಯ ಪ್ರತಿದಿನ ಎಬ್ಬಿಸಿದರೂ ಎದ್ದವನಲ್ಲ. ಗಾಡಿಯು ಗಂಟೆಯಾದ ಮೇಲೆ ಮಡದಿ ಮೆಲುದನಿಯಿಂದ 'ಏಳ್ರಿ' ಎಂದರೆ ಈ ನಿದ್ದೆಗೇಡಿಗೆ ಎಚ್ಚರವಾಗುವದೇ? ತಾಯಿ ಒಲ್ಲೆಯಿಂದ ಬಾಬಣ್ಣಾ, ಬಾಬೂ, ಬಾಬೂರಾಯಾ ಎಂದು ಕರೆಕರೆದು 'ಕುಂಭಕರ್ಣಾ ಏಳು' ಎಂದು ಉದಯರಾಗ ಹಾಡಿ, ಮೂರ್ಖಾ, ಮುಗ್ಗಲಗೇಡೀ, ಮುಂಡೇಮಗನೇ, ಎಂದು ಅಂಥವನನ್ನು ಪಡೆದುದಕ್ಕೆ ಪರ್ಯಾಯವಾಗಿ ತನ್ನನ್ನೂ ಅಂದುಕೊಂಡು ಕಡೆಗೆ ಕಿವಿಯಲ್ಲಿ ನೀರು ಹಾಕಿ ಎಬ್ಬಿಸಬೇಕು. ಎದ್ದವನೇ ಕೆಂಪುಗಣ್ಣಿನಿಂದ ದುರುದುರು ನೋಡಿ ತಾನು ಅನ್ನಿಸಿಕೊಂಡ ಬೈಗುಳದ ಸಾಲ ಮುಟ್ಟಿಸಿ, ಹಾಸಿಗೆಯಲ್ಲಿಯೇ ಚಹಾ ಬಸಿದುಕೊಂಡು, ಮುಖ ತೊಳೆಯದೇ ಸ್ಟೇಶನ್ನಿಗೆ ಹೋಗುವದು ಅವನ ವಾಡಿಕೆ. ಎಂಟು ದಿನ ಹಗಲು ಪಾಳಿಯಾದರೆ ಎಂಟು ದಿನ ರಾತ್ರಿ ಪಾಳಿ — ಹೀಗಾಗಿ ಅವನ ಎಚ್ಚರ-ನಿದ್ರೆಗಳಿಗೆ ನಿಯಮವಿಲ್ಲ. ಮಲಗಲು ಸಿಕ್ಕರೆ ಹಗಲೂ ಅಷ್ಟೇ ತನ್ಮಯತೆಯಿಂದ ನಿದ್ದೆ ಹೋಗುತ್ತಾನೆ; ಉಣ್ಣಲು ಸಿಕ್ಕರೆ ರಾತ್ರಿಯೂ ಅಷ್ಟೇ ಆಸ್ಥೆಯಿಂದ ಹೊಟ್ಟೆತುಂಬಿಸುತ್ತಾನೆ. ತನ್ನ ಕೆಲಸದ ಚಿಂತೆ ತನ್ನ ಮಡದಿಗೂ ತಾಯಿಗೂ ಹಂಚಿಕೊಟ್ಟಿದ್ದಾನೆ. ಅವರು ಎಬ್ಬಿಸಿ ಹೊರಕ್ಕೆ ದಬ್ಬಬೇಕು; ಕರೆದು ಕೂಳಿಕ್ಕಬೇಕು; ಎಳೆದು ತಂದು ಮಲಗಿಸಬೇಕು. ಒಮ್ಮೊಮ್ಮೆ ಇಬ್ಬರೂ ಎಬ್ಬಿಸಲು ಸಮರ್ಥರಾಗದೆ ಸೋತು, 'ಕೆಲಸ ಹಾಳಾಗಲಿ' ಎಂದು ಬಿಟ್ಟರೆ ಇವನಿಗೆ ಕೆಲಸ ಒಪ್ಪಿಸಬೇಕಾಗಿದ್ದ ಮಾಸ್ತರೇ ಬಂದು ಎಬ್ಬಿಸಬೇಕು. ಆಗ ಎದ್ದವನು ಮಡದಿಗೂ ತಾಯಿಗೂ 'ಎಚ್ಚರಗೇಡಿಗಳು; ಹೇಳಿದ ಸಮಯ ಎಬ್ಬಿಸುವಂತಿಲ್ಲ'—ಎಂದು ರೇಗಾಡಿ ಚಹಾ ಕುಡಿಯದೇ ಎದ್ದು ಹೊರಡುತ್ತಾನೆ.

ಅಂದು ಶನಿವಾರ. ಬಾಬೂರಾಯನಿಗೆ ವಾರದ ಬಿಡುವಿನ ದಿನ. ಅಂದು ಯಾಕೋ ಅವನಿಗೆ ಕರೆಯದೆ ಎಚ್ಚರವಾಯಿತು. 'ದೆವ್ವ ಎದ್ದಂತೆ ಯಾಕೆ

ಎದ್ದೆಯಪ್ಪಾ—ಇಂದು ಕೆಲಸವಿಲ್ಲ—ಮತ್ತಿಷ್ಟು ನಿದ್ದೆ ಮಾಡು' ಎಂದು ತಾಯಿ ಹೇಳಿದಳು. ಹೊಡತಿ ಇನ್ನೂ ಚಹಾ ಮಾಡುವ ವಿಚಾರವನ್ನೇ ಮಾಡಿದ್ದಿಲ್ಲ. ಎದ್ದ ಬಾಬಣ್ಣ ತನ್ನಷ್ಟಕ್ಕೆ ಮುಖ ತೊಳೆದ. ಹೊರಕ್ಕೆ ಹೋಗಿ ಬಂದ. 'ಸ್ನಾನ' ಎಂದ. 'ನೀರು ಕಾದಿತ್ತು. ಅದು ಯಾವ ಜೈವವೋ'—ಎಂದು ತಾಯಿ ನೀರು ತೋಡಿಕೊಟ್ಟರು. ಸ್ನಾನ ಮಾಡಿ ಶನಿ ಮಹಾತ್ಮ್ಯ ಓದಿದ. ಅವನು ಶನಿವಾರ ಮಾಡುವುದು ವಾಡಿಕೆ. ಅಂದರೆ ಅಂದು ಒಂದೇ ಹೊತ್ತು ಊಟ. ಎರಡನೆಯ ಊಟಕ್ಕೆ ಬದಲು ಎರಡು ಸಲ ಫಲಾಹಾರ ಮಾಡುತ್ತಾನೆ. ಮನೆಯಲ್ಲಿ ಬಿಡುವಿಲ್ಲವಾದರೆ 'ಶನಿ ಮಹಾತ್ಮ್ಯ'ವನ್ನು ಆಫೀಸಿನಲ್ಲಾದರೂ ಕೂತು ಓದುತ್ತಾನೆ. ಅಂದು ಗಾಡಿಗಳು ಸರಿಯಾಗಿ ಓಡಾಡುವದು ಶನಿಪ್ರಭಾವದಿಂದಲೇ. ಇಲ್ಲವಾದರೆ ನಿಂತುಕೊಳ್ಳುತ್ತವೆ; ಡಿಕ್ಕಿ ಹೊಡೆದರೂ ಹೊಡೆದವೇ. ಆದ್ದರಿಂದ ಶನಿವಾರ ಬೇರೆ ಮಾಸ್ತರರು ಇವನನ್ನಾಗಲಿ, ಗಾಡಿಗಳನ್ನಾಗಲಿ ಸರಿಯಾಗಿ ನೋಡಿಕೊಳ್ಳಬೇಕಾಗುತ್ತದೆ; ಅದೂ ಅವನ ತಾಯಿಯ ಪ್ರಾರ್ಥನೆಯ ಮೇರೆಗೆ. ಅಂಥ ತನ್ಮಯತೆ ಅವನಿಗೆ ಶನಿ ಮಹಾತ್ಮ್ಯದಲ್ಲಿ! ಶನಿಯ ಪ್ರಭಾವವೇ ಇರಬೇಕು—ಅವನು ಯಾವ ಕೆಲಸವನ್ನಾದರೂ ಹಿಡಿದರೆ ಸಾಕು. ಮತ್ತೊಂದರ ವಿಚಾರ, ಎಚ್ಚರ ಇಲ್ಲದೆ ಅದರಲ್ಲಿ ಮುಳುಗಿಹೋಗುತ್ತಾನೆ.

ಶನಿವಾರ ಸಂಜೆ ಮಾರುತಿಗೆ ಕಾಯಿ ಒಡೆಸು. ಫಲಾಹಾರದ ಉಪ್ಪಿಟ್ಟಿಗೆ ಒಂದು ಬಟ್ಟಲು ಕೊಬ್ಬರಿ ಬೀಳಬೇಕು. ಅದು ಕ್ರಮ. ಮಾರುತಿ ಊರಿದ್ದಲ್ಲೆಲ್ಲಾ ಇರುತ್ತಾನಷ್ಟೆ. ಆದರೆ ಸ್ಟೇಶನುಗಳಲ್ಲಿ ಅವನು ಇರಬೇಕೆಂದಿಲ್ಲ. ಸ್ಟೇಶನು ಭಾರತೀಯ ವಿಚಾರವಲ್ಲ—ಆಚಾರವೂ ಅಲ್ಲ. ಆದರೂ ರೈಲು ಭಾರತೀಕರಣ ಹೊಂದುತ್ತ ಅಲ್ಲಲ್ಲಿ ಒಂದೊಂದು ಗುಡಿಗಳಾಗುತ್ತಿವೆ. ಅದಿಲ್ಲವಾದರೆ ಸಜೀವ ಮಾರುತಿರಾಯರು ಸ್ಟೇಶನಿನ ಗಿಡದ ಮೇಲೆ, ಗೂಡ್ಸಶೆಡ್ಡಿನ ಹತ್ತಿರ ಸುಳಿದಾಡುವದು ವಾಡಿಕೆ. ಬಾಬೂರಾಯ ಅಂಥ ಮಾರುತಿಗಳಿಗೆ ಒಂದು ಬಟ್ಟಲು ಕೊಬ್ಬರಿ ದಾನ ಮಾಡುವದೂ ರೂಢಿ. ಆದ್ದರಿಂದ ಶನಿವಾರ ಗೊತ್ತು ಮಾಡಿಕೊಂಡು ಆ ಪ್ರಾಣಿಗಳು ಅಂದು ಹಿಂಡುಹಿಂಡಾಗಿ ಬಂದು ಸೇರುತ್ತವೆ.

ಶನಿವಾರ ತೆಂಗಿನಕಾಯಿಯನ್ನು ಪೇಟೆಯಿಂದಲೇ ತರಬೇಕು. ಇವನಿದ್ದ ಅಮರಗೋಳ ಸ್ಟೇಶನ್ನಿಗೆ ಪೇಟೆಯಿಲ್ಲ. ಸ್ನಾನ-ಪಠಣ ಮುಗಿಸಿಕೊಂಡು

ರಾಯ ಹುಬ್ಬಳ್ಳಿಗೆ ತೆಂಗಿನಕಾಯಿ ತರುವದೆಂದು ಹೊರಟ. ಇವನು ಹತ್ತಿದ ಗಾಡಿ ಧಾರವಾಡಕ್ಕೆ ತಂದಿತು. ಕೆಲಸವಮೇಲಿರುವಾಗ ಯಾವ ಗಾಡಿ ಎಲ್ಲಿಗೆ ಕಳಿಸುವದೆಂದು ಅವನಿಗೆ ಗೊತ್ತು. ಇಂದಾದರೆ ಅವು ಒಯ್ದಲ್ಲಿ ಅವನು ಹೋಗುವವ

ಧಾರವಾಡವಲ್ಲಿಳಿದು ಪೇಟೆಗೆ ಹೋಗದೆ ಗೂಡ್ಸಶೆಡ್ಡಿನಲ್ಲಿಯೇ ಒಂದು ಕಾಯಿ ಸಂಪಾದಿಸಿ ಮರು ಬಂಡಿಗೆ ಮರಳುವದೆಂದು ತವಕಪಟ್ಟ. ಆದರೆ ಇವನು ಪಡೆದ ಒಂದು ತೆಂಗಿಗೆ ಗೂಡ್ಸಸ್ಟಾಫಿನವರು ಇವನ ಒಂದು ರೂಪಾಯಿ ಕ್ಷೌರಮಾಡಿದರು. ಚಹಾ-ನಾಲ್ಕಾರು ಜನ-ಎಂದರೆ ಈ ದಿನ ದಲ್ಲಿ ಒಂದು ರೂಪಾಯಿಗೆ ಕಡಿಮೆ ಹೇಗಾದೀತು ? ಶನಿವಾರ ಚಹಾಕ್ಕೇನೂ ನಿರ್ಬಂಧವಿಲ್ಲ ಬಾಬೂರಾಯನಿಗೆ. ಈ ಸಂಭ್ರಮದಲ್ಲಿ ಗಾಡಿ ಹೊರಟು ಹೋಗಿತ್ತು.

ದಿನಾ ಗಾಡಿ ತಪ್ಪಿಸಿಕೊಳ್ಳುವ ಹಲವರನ್ನು ಇವನು ಕಾಣುತ್ತಾನೆ. ಇಂದು ಇವನು ಗಾಡಿ ತಪ್ಪಿಸಿಕೊಂಡದ್ದನ್ನು ಹಲವರು ನೋಡುವಂತಾ ಯಿತು. ಅವರೆಲ್ಲ ಅಂದು ಅವನ ಪಾಲಿಗೆ ಮಾರುತಿರಾಯರೇ. ಇಂದು ತಾನೊಬ್ಬ ಹುಚ್ಚು ಮಂಗನಾಗಿ ಉಳಿದ.

ಸ್ಟೇಶನ ಮಾಸ್ತರರಿಗೆ " ಫೋನು " ಕಾಡಕರ ಹೇಗೋ ಆಗುತ್ತದೆ. ಎದುರು ಬಂದಾಗ ಆಡುವುದಕ್ಕಿಂತ ಫೋನಿನಲ್ಲಿಯೇ ಹೆಚ್ಚು ಮಾತು.ಆಡುವ ಆಡಬಾರದ ಎಲ್ಲ ಮಾತುಗಳನ್ನು ಹಿಂದು-ಮುಂದಿನ ಸ್ಟೇಶನಿನವರು ಹಿಂದು-ಮುಂದಿಲ್ಲದೆ ಆಡಿಕೊಳ್ಳುತ್ತಾರೆ. ಅವರ ಭಾಷೆ ! ಅವರಿಗೇ ಅರ್ಥವಾಗಬಲ್ಲ ಸಾಂಕೇತಿಕ ಭಾಷೆ ಅದು. ಇಂಗ್ಲಿಷು ಮಿಶ್ರವೋ--ಕನ್ನಡ-ಹಿಂದೀ-ಮರಾಠಿ ಗಳ ಮಿಸಳೋ, ತೆಲಗು-ತಮಿಳುಗಳ ಕೂಟೋ ಆಗಿರುತ್ತದೆ.

ಬಾಬೂರಾಯ ಬಂದು ಫೋನು ಎತ್ತಿಕೊಂಡು ಅಮರಗೋಳ ಎ. ಎಸ್. ಎಂ. ಗೆ (ಅಸಿಸ್ಟಂಟ ಸ್ಟೇಶನ್ ಮಾಸ್ತರು) ತಾನು ಗಾಡಿ ' ಮಿಸ್ ' ಮಾಡಿದ ಮೋಜು ತಿಳಿಸಬೇಕೆಂದ. ' ಹಲೋ ' ಎಂದರೆ ' ಯಾರು ' ಎಂದು ಬಂತು ಮರುದನಿ. ' ನಾನು ಬಾಬೂರಾಯ ' ಎಂದರೆ-- ' ಅಯ್ಯೋ ' ಎಂದ ಹಾಗಾಯಿತು.

" ಯಾಕೆ-ಏನು ? "

"I say-ನೀವು ಗಾಡಿ ತಪ್ಪಿಸಿಕೊಳ್ಳಬಾರದಿತ್ತು."

"Yes. ಹೌದು" ಎಂದ.

"ಅಲ್ಲಿ–" ಎಂದು ಮಾರುಲಿ ಮುಂದುವರಿಯಿತು. "ನೀವು ಹುಬ್ಬಳ್ಳಿಗೇ ಹೋಗಬೇಕಿತ್ತು." ಎಂದಿತು.

"ಅಚ್ಛಾ; ಕ್ಯೋಂ" ಎಂದ.

"ನೀವು ಹುಬ್ಬಳ್ಳಿಯಲ್ಲಿ ಅರ್ಜೆಂಟಾಗಿ ಇರಬೇಕಿತ್ತು."

"ಯಾಕೆ? why?"

"ನಿಮ್ಮ……ಅಂಕಲ್—ಮಾಮಾ……"

"ಏನು? what?"

"ಹೋದರಂತೆ. ಈಗ ಫೋನ್ ಬಂತು. I am very sorry master."

ಬಾಬೂರಾಯನ ಕೈಯಿಂದ ಫೋನಿನ 'ಬಾಯ್ಗ್ನಿ' ಕಳಚಿ ಬಿತ್ತು. ಇವನ ಗಾಬರಿಯನ್ನು ನೋಡಿ ಹತ್ತಿರ ಇದ್ದ ಧಾರವಾಡದ ಎ. ಎಸ್. ಎಂ. ಫೋನ್ ಹಿಡಿದು ವಿಷಯವೇನೆಂದು ತಿಳಿಯಲೆತ್ನಿಸಿದ. ಗಾಬರಿಯು ಸಮಾಚಾರವೇ ಹೌದು. ಹುಬ್ಬಳ್ಳಿ ವರ್ಕ್‌ಶಾಪಿನಲ್ಲಿ ದೊಡ್ಡ ಕೆಲಸದಲ್ಲಿದ್ದ ಬಾಬೂರಾಯನ ಸೋದರಮಾವ ಆಫೀಸಿನಲ್ಲಿಯೇ ತೀರಿಕೊಂಡರೆಂದಿತ್ತು. ಹೆಚ್ಚಿನ ವಿವರ ತಿಳಿಯಲಿಲ್ಲ. ತಲೆ ಹಿಡಿದುಕೊಂಡಿದ್ದ ಬಾಬೂರಾಯ ಹಾಗೇ ಕುಳಿತಿದ್ದ. ಹುಬ್ಬಳ್ಳಿಗೆ ಇನ್ನೆರಡು ತಾಸು ಗಾಡಿ ಇಲ್ಲ. ಧಾರವಾಡದ ಎ. ಎಸ್. ಎಂ. ಒಂದು ಟಾಂಗಾ ಕರೆದು ಬಾಬೂರಾಯನನ್ನು ಅದರಲ್ಲಿ ಹತ್ತಿಸಿ 'ಮೋಟಾರಿಗೆ ಹೂಡಿ' ಎಂದು ಟಾಂಗಾವಾಲಾಗೆ ಹೇಳಿದ

ಬಾಬೂರಾಯ ಕೊಂಚ ಚೇತರಿಸಿಕೊಂಡು ಪುಣೆ, ಮುಂಬಯಿಯಲ್ಲಿರುವ ತನ್ನ ತಮ್ಮಂದಿರಿಗೆ ಒಂದೊಂದು 'ಪ್ರೆಸ್ ಮೆಸೇಜ್' ಕಳಿಸಬೇಕೆಂದು ಧಾರವಾಡದ ಮಿತ್ರನಿಗೆ ಕೇಳಿಕೊಂಡ. ಆ ಮಿತ್ರ ಎ ಎಸ್. ಎಂ. 'ಹುಬ್ಬಳ್ಳಿಗೆ ಹೋಗಿ ವಿವರ ತಿಳಿದು ಅಲ್ಲಿಂದಲೇ ಕಂಟ್ರೋಲ್ ಫೋನಿನಿಂದ ಹೇಳಬಹುದು. ಈಗ ನೀವು ಹೋಗಿ' ಎಂದು ಬೀಳ್ಕೊಟ್ಟ.

ಬಾಬೂರಾಯನಿಗೆ ಧೈರ್ಯವೇ ಇಲ್ಲ. ಒಮ್ಮೆಲೇ ಸಿಡಿಲೆರಗಿದಂತಾಗಿದೆ. ನಾಲ್ಕು ದಿನದ ಹಿಂದೆ ಮಾವನನ್ನು ಕಂಡಿದ್ದ. ಯಾವೊಂದು ಬೇನೆ-ಬೇಸರ ಇದ್ದಿಲ್ಲ. 'ಈ ಸುದ್ದಿ ಸುಳ್ಳಿರಲಾರದೇ' ಎಂದೊಮ್ಮೆ ಚಿಂತಿಸಿದ. ಇಂಥ

ಸುದ್ದಿ ಸುಳ್ಳಾಗುವದಿಲ್ಲ. ಒಳ್ಳೆಯ ಸುದ್ದಿಯಾದರೆ ಹುಸಿಯಾಗಬಹುದು. ಹಿಂದೊಮ್ಮೆ ತನ್ನ ತಂದೆ ತೀರಿಕೊಂಡಾಗ ಬಂದ ಸುದ್ದಿ ನಿಜವೇ ಆಗಿತ್ತು. ಅಂತೂ ಮಾವ ಹೋಗಿಬಿಟ್ಟದ್ದೇ ನಿಜ ವಿದ್ದೀತು—ಎಂದುಕೊಂಡ. ಇದ್ದೀತು ಯಾಕೆ? ಇರಲೇಬೇಕು ಎಂದೇ ನಂಬಿಕೊಂಡ.

ಅಷ್ಟರಲ್ಲಿ ಟಾಂಗಾ ಊರ ಮಧ್ಯಕ್ಕೆ ಬಂದಿತ್ತು. ಧಾರವಾಡದಲ್ಲಿ ಬಾಬೂರಾಯನ ಬೀಗನೊಬ್ಬನಿದ್ದಾನೆ. ಅವನ ತಂಗಿಯ ಗಂಡನಾತ. ಅವನಿಗೆ ಸಮಾಚಾರ ತಿಳಿಸಿದರಾಯಿತೆಂದು ಅಂಗಡಿ ಬೀದಿಗೆ ಬಂದ. ಬೀಗ ಮಹಾಶಯನದೊಂದು ವ್ಯಾಪಾರ. ಅವನು ಯಾವದಾದರೊಂದು ನೆಪದಿಂದ ಅಂಗಡಿಯ ಹೊರಗೆ ಇರುವದೇ ರೂಢಿ. ಇಂದು ಇವನನ್ನು ಕಾಯ್ದು ಕುಳಿತಂತೆ ಅವನೇ ಎದುರುಗೊಂಡ.

ವಿಘ್ನಕ್ಕೆ ಎಷ್ಟುಬೇಕೋ ಅಷ್ಟು ಅನುಕೂಲ. ಆಗಬಾರದ ಸುದ್ದಿ ಹರಡಲು ಸಮಯವೇ ಬೇಕಿಲ್ಲ. ಬಾಬೂರಾಯನ ಗಾಬರಿ ಮುಖನೋಡಿ ಬೀಗ ಮಹಾಶಯನೂ ಗಾಬರಿಯಾದ. ಏನೆಂದಾಗ "ಮಾವಾ...." ಎಂದು ಬಿಕ್ಕಳಿಸಿದ. 'ಯಾಕೆ—ಏನು?' ಎಂದಾಗ ಅರ್ಧ ಅರ್ಧ ಮಾತಿನಲ್ಲಿ 'ಆಫೀಸಿನಲ್ಲಿ—ಈಗ—ಫೋನು—' ಮಾತು ಮುಗಿಯಲಿಲ್ಲ.

"ನೀವು ಇಲ್ಲಿ ಯಾಕೆ?" ಎಂದ ಬೀಗ. 'ಶನಿವಾರ-ತೆಂಗಿನಕಾಯಿ'–ಎಂದಿಷ್ಟೆ ಹೇಳಿ ಬಾಬೂರಾಯ ಅಳತೊಡಗಿದ.

ಅವನನ್ನು ಕೆಣಕಿ ಹೆಚ್ಚಿನ ವಿವರ ತಿಳಿಯಲು ಬೀಗ ಬಿಂದೂರಾಯನಿಗೆ ವ್ಯವಧಾನ ಉಳಿಯಲಿಲ್ಲ. ಮುಂದಾಗಿ ಅವನೇ ಟಾಂಗಾ ಏರಿದ. ಮೋಟಾರ ಸ್ಟ್ಯಾಂಡಿಗೆ ಹೊರಟರು.

ಬಿಂದೂರಾಯನ ಹುಡದಿ ಮುಂಬಯಿಗೆ ತನ್ನ ಇನ್ನೊಬ್ಬ ಅಣ್ಣನಲ್ಲಿ ಹೋಗಿದ್ದಾಳೆ. ಅಂಗಡಿಯ ಆಳಿನ ಕೂಡ ಮನೆಗೆ ಹೇಳಿಕಳಿಸಿದ. ಅವನಿಗೂ ಮುಂಬಯಿಗೆ ತಂತಿ ಬಿಡಬೇಕೆಂದು ಒಮ್ಮೆ ಅನಿಸಿತು. ಆದರೆ ಹುಬ್ಬಳ್ಳಿ ಸೇರುವ ಆತುರ ಬಲವಾಗಿತ್ತು.

ಬಾಬೂರಾಯನ ಸೋದರ ಮಾವ ಬಂಡೇರಾಯರು ಇಪ್ಪತ್ತು ವರುಷ ದಿಂದ ಹುಬ್ಬಳ್ಳಿಯ ವರ್ಕಶಾಪಿನಲ್ಲಿ ಕೆಲಸದಲ್ಲಿದ್ದರು. ಅವರಿಗೆ ಈಗ

ಮೇಲಿನ ಒಂದು ಸ್ಥಳವೂ ಒಂದು ಒಳ್ಳೆಯ ಮನೆಯೂ ದೊರೆತಿವೆ. ಈಗ-ಲೀಗ ಅವರ 'ಶೋಕೀ' ಸುರುವಾಗಿತ್ತು.

ಬಾಬೂರಾಯನ ತಂದೆ ತೀರಿದಾಗ ತನ್ನ ತಂಗಿಯನ್ನೂ ಅವಳ ಐದು ಮಕ್ಕಳನ್ನೂ ತಂದು ಸಾಕಿ ಸಲಹಿ ದೊಡ್ಡವರನ್ನು ಮಾಡಿದವರು ಬಂಡೇರಾಯರು. ತಕ್ಕ ವಿದ್ಯಾಭ್ಯಾಸವನ್ನೂ ಕೊಡಿಸಿ ಕೆಲಸಕ್ಕೆ ಹಚ್ಚಿದವರವರು. ಬಾಬೂರಾಯನಿಗೆ ತನ್ನ ಇಷ್ಟ ಒಬ್ಬ ಮಗಳನ್ನೇ ಧಾರೆ ಎರೆದು ಕೊಟ್ಟವರು. ಬಾಬೂರಾಯನ ತಂಗಿಗೆ ಬಿಂದೂರಾಯನೊಡನೆ ಮದುವೆ ಮಾಡಿಕೊಟ್ಟವರೂ ಅವರೇ. ಹೆಚ್ಚೇನು? ಎರಡೂ ಮನೆಗೆ ಒಬ್ಬರೇ ಯಜಮಾನರಾಗಿದ್ದುಕೊಂಡು ಬಂದವರು. ಮುಂಬಯಿ—ಪುಣೆಗಳಲ್ಲಿರುವ ಅಳಿಯಂದಿರು ತಾವೇ ಹುಡುಗಿಯರನ್ನು ಆರಿಸಿಕೊಂಡರೂ ಮಾವನ ಒಪ್ಪಿಗೆಯ ಶರಾ ಬೀಳದೆ ಮದುವೆಯಾಗುವಂತಿಲ್ಲವೆಂಬ ತಮ್ಮ ತಾಯಿಯ ಮಾತನ್ನು ದಾಟಲಾರದೆ ತಾಯಿಯ ರಾಯಭಾರದಿಂದಲೇ ಒಪ್ಪಿಗೆ ಪಡೆದವರು. ಮದುವೆ ನಿಂತು ಮಾಡಿದ್ದು ಬಂಡೇರಾಯರೇ.

ತಾಯಿ ಸತ್ತರೆ ಸೋದರ ಮಾವನಿರಬೇಕು ಅನ್ನುತ್ತಾರೆ. ತಂದೆ ಇಲ್ಲದಾಗಲೂ ಸೋದರ ಮಾವನೇ ಇವರಿಗಾಗಿದ್ದ. ಮನೆಯಲ್ಲಿ ಬಂಡೇರಾಯರ ತಾಯಿ. ಮಡದಿ ಇಬ್ಬರೇ ಇದ್ದಾರೆ

'.....ಅವರ ಅವಸ್ಥೆ ಏನಾಗಿರಬೇಡ? ರೇಲ್ವೇ ಕ್ವಾಟರ್ಸದಲ್ಲಿ ಮನೆ. ಸುತ್ತ ಮುತ್ತ ಸಾಹೇಬಜನ. ನನ್ನವರು—ತನ್ನವರು ಯಾರೂ ಹತ್ತಿರ ಇಲ್ಲ. ಶವ ಮನೆಗೆ ತಂದರೋ—ಆಫೀಸಿನಲ್ಲಿಯೇ ಇದೆಯೋ? ಒಮ್ಮೆಲೆ ಏನಾಗಿರಬೇಕು? ಅವರಿಗೆ ರಕ್ತದ ಒತ್ತಡವಿತ್ತು. ಅದೇ ಕಾರಣವಿದ್ದೀತೆ? ಆಫೀಸಿನಲ್ಲಿ—ಅದು ಹೇಗೆ?

"ದಾರಿಯಲ್ಲಿ ಹೋಗುವವರೇ ಸತ್ತಿಲ್ಲವೇ? ಆಫೀಸಿನಲ್ಲೇಕೆ ಕೂಡದು? ಎದೆ ಒಡೆದಿರಬೇಕು. "ಹಾರ್ಟ ಫೇಲ್ !...."

ಬಾಬೂರಾಯ ಟಾಂಗಾದಲ್ಲಿಯೇ ಚಿಂತಿಸುತ್ತಿದ್ದಾನೆ.

* * * *

ಮೋಟಾರು ಇವರಿಗಾಗಿಯೇ ಕಾದುನಿಂತಿತ್ತು. ಎಷ್ಟೋ ಸಲ ಗಂಟೆ ಗಂಟೆ ಕಾಯಬೇಕಾಗುತ್ತದೆ. ಇಂಪದೇನು ಕಾರಣವೋ! ಶನಿವಾರ ಹುಬ್ಬಳ್ಳಿ ಸಂತೆ. ಆದರೂ ಸ್ಥಳವಿತ್ತು. ಬಾಬೂರಾಯನ ಶನಿಪ್ರಭಾವವೇ ಇದ್ದೀತು. !

ಬೇಗರಿಬ್ಬರೂ ಬಸ್ ಏರಿ ಹೊರಟರು. ಒಳ್ಳೆಯ ಹೊಸ ಮೋಟಾರು. ಸರಕಾರೀ ಸಾರಿಗೆ. ವೇಗವಾಗಿಯೇ ಹೊರಟಿತ್ತು. ಆದರೆ ಇವರಿಬ್ಬರ ಮನೋವೇಗದ ಮುಂದೆ ಅದೆಂತು ಓಡೀತು ?

ಇಬ್ಬರೂ ಹುಬ್ಬಳ್ಳಿಯ ಮನೆ—ಆಫೀಸು ಚಿತ್ರಿಸಿಕೊಳ್ಳುತ್ತಿದ್ದಾರೆ.

“ಮನೆಯಲ್ಲಿ ಯಾರೂ ಇಲ್ಲ. ಬಂಡೇರಾಯರಿಗೆ ಹಾರ್ಟ ಅಟ್ಯಾಕ್ ಬಂದು ನಾಡಿ ನಿಂತುಹೋಯಿತು. ರೇಲ್ವೇ ಡಾಕ್ಟರು ಬಂದರು. ಎಂಬುಲನ್ಸ್ ಕಾರೂ ಬಂತು. ದವಾಖಾನೆಗೆ ದೇಹ ಸಾಗಿಸಲಾಗಿದೆ. ಒಳಗಿನ ದೊಡ್ಡ ರೂಂನಲ್ಲಿ ಬಿಳಿಬಟ್ಟೆಯ ದಾಯಿಗಳು—ಡಾಕ್ಟರರು ಓಡಾಡುತ್ತಿದ್ದಾರೆ.

“ಹೊರಬಾಗಿಲ ಬಳಿ ಬಂಡೇರಾಯರ ತಾಯಿ-ಮಡದಿ ಬಿಕ್ಕಳಿಸುತ್ತ ನಿಂತಿದ್ದಾರೆ. ಮುಖವೆಲ್ಲ ವಿವರ್ಣವಾಗಿದೆ.”

ಬಿಂದೂರಾಯ ಒಂದು ತಿಂಗಳ ಕೆಳಗೆ ಬಂಡೇರಾಯರನ್ನು ಕಂಡಾಗ ಅವರಿಗೆ ದೊರೆತ ಮನೆಯ ಬಗ್ಗೆ ಬಹಳ ತೃಪ್ತಿ ವ್ಯಕ್ತಮಾಡಿದ್ದ. ವಿಶಾಲವಾದ ಮನೆ. ಗಾಳಿ-ಬೆಳಕಿಗೆ ಕೊರತೆಯಿಲ್ಲ. ಮನೆಯಲ್ಲಿ ಮಕ್ಕಳು ಯಾರೂ ಇಲ್ಲ. ಇಟ್ಟ ಸಾಮಾನು ಇಟ್ಟಲ್ಲಿ ಇರುತ್ತವೆ. ಬಂಡೇರಾಯರು ಬಹಳ ಶಿಸ್ತಿನ ಮನುಷ್ಯ! ಯಾವೊಂದು ಸಾಮಾನೂ ಕೆಡುವಂತಿಲ್ಲ; ಸ್ಥಾನ ಪಲ್ಲಟವಾಗುವಂತಿಲ್ಲ. ಒಂದು ಕಸದ ಕಣ ಬೀಳುವಂತಿಲ್ಲ. ಹಾಸಿದ ಹಾಸಿಗೆ ಮುದುಡುವಂತಿಲ್ಲ. ಅವರ ಕ್ಷೌರದ ರೇಝರು ಹನ್ನೆರಡು ವರುಷಗಳ ಹಿಂದೆ ಕೊಂಡದ್ದು—ಈಗ ಕೊಂಡಂತೆ ಹೊಳೆಯುತ್ತದೆ. ಮೂವರೇ ಆದರೂ ನಾಕಷ್ಟು ಪಾತ್ರೆ ಪಡಗ ಕೊಂಡುಹಾಕಿದ್ದಾರೆ. ಈ ಮೊದಲು ಇದ್ದ ಚಿಕ್ಕ ಮನೆಯಲ್ಲಿ ಅವನ್ನೆಲ್ಲಿ ತುಂಬಿಸಿ ಪೇರಿಸಿ ಇಟ್ಟಿದ್ದರು. ಈಗಾದರೆ ಅವುಗಳಿಗೆ ಉಚಿತ ಸ್ಥಾನವಿದೆ

ಬಿಂದೂರಾಯ ಹೇಳಿದ್ದ: ಮನೆ ವಿಶಾಲವಾಗಿದೆ. ಒಂದಿಷ್ಟು ಫರ್ನೀಚರು ಯಾಕೆ ಮಾಡಿಸಬಾರದು? ನಿಮಗೇನು ವರ್ಗವಾಗುವಂತಿಲ್ಲ. ಒಂದು ರೇಡಿಯೋ ಯಾಕೆ ಕೊಳ್ಳಬಾರದು—ಎಂದು. ಬಂಡೇರಾಯರು ರೇಡಿಯೋ ಮಾತ್ತಿಗೆ ಸಮ್ಮತಿಸಿದ್ದರು. ಫರ್ನೀಚರು ಇದ್ದವೇ ಸಾಕೆಂದು ತವರ ಅಭಿಪ್ರಾಯ. ಮದರಾಸಿಗೆ ವರ್ಗವಾದರೆ ಹೇಗೆ? ಎಂದು ಒಂದು ಶಂಕೆಯನ್ನು ವ್ಯಕ್ತಪಡಿಸಿದ್ದರು.

ಬಂಡೇರಾಯರಿಗೆ ಸ್ವಲ್ಪ ಪಿತ್ರಾರ್ಜಿತ ಆಸ್ತಿಯೂ ಇದೆ. ತಂಗಿಯ ಸಂಸಾರ ಭಾರದಲ್ಲಿ ಅವರಿಗೆ ಸಂಬಳದಲ್ಲಿ ಹಣಮಾಡಲು ಸಾಧ್ಯವಾಗಿಲ್ಲವಾದರೂ ಕೊಂಚಕೊಂಚವಾಗಿ ದುಡ್ಡು ಈಗ ಸಂಗ್ರಹವಾಗುತ್ತಿದೆ. ಪ್ರಾವಿಡೆಂಟ ಫಂಡೂ ಇದೆ ಇದ್ದ ಸ್ಥಳದಿಂದ ಮೇಲಿನ ಹುದ್ದೆ ಸಿಗಲಿಲ್ಲವೆಂದು ಬೇಸರಿಸಿ ಒಮ್ಮೆ ಕೆಲಸ ಬಿಡಬೇಕೆಂದು ಬಿಂದೂರಾಯನ ಕೂಡ ವ್ಯವಹಾರದ ಪ್ರಸ್ತಾಪ ಮಾಡಿದ್ದರು. ಅವನು 'ಇಪ್ಪತ್ತು ಸಾವಿರ ರೂ. ಆದರೆ ಏನಾದರೂ ಮಾಡಬಹುದು'—ಎಂದಿದ್ದ. ತನ್ನಲ್ಲಿ ಅಷ್ಟು ಹಣವಿಲ್ಲೆಂದು ಅವರು ಅಂದಿದ್ದರು. ಎಷ್ಟು ಇದೆಯೆಂದು ಅವರು ಹೇಳಲಿಲ್ಲ; ಇವನು ಕೇಳಲಿಲ್ಲ. ಬಾಂಧವ್ಯದಲ್ಲಿ ಇದೆಲ್ಲಾ ಬಹಳ ಸೂಕ್ಷ್ಮವಾದ ವಿಚಾರ. ಇಬ್ಬರೂ ಮುಂದುವರಿಯಲಿಲ್ಲ.

ಬಾಬೂರಾಯ ಯೋಚಿಸುತ್ತಾನೆ: ಈ ಕೂಡಲೇ ರೇಲ್ವೆಯವರು ಮನೆ ಬಿಡಿಸುತ್ತಾರೆ. ಮಾವನ ಮನೆಯನ್ನು ತನ್ನ ಮನೆಯಲ್ಲಿ ತುಂಬಿಕೊಳ್ಳಲು ಸಾಧ್ಯವಿಲ್ಲ. ತನಗಿದ್ದುದು ಎರಡಂಕಣದ ಒಂದು ರೇಲ್ವೇ ಕ್ವಾರ್ಟರು; ಅಂದರೆ ಕಾಲಂಶದ ಮನೆ. ಯಾವಾಗ ವರ್ಗವೋ ತಿಳಿಯದು. ಅವರಿಬ್ಬರನ್ನು ಬೇರೆ ಮನೆ ಮಾಡಿ ಎಲ್ಲಿ ಇಡಬೇಕು? ಈಗ ಮನೆಗಳೆಲ್ಲಿ ಸಿಕ್ಕುತ್ತವೆ? ಅಂತೂ ಒಂದಲ್ಲ ನೂರು ಸಮಸ್ಯೆಗಳು ಎದುರುನಿಂತಂತಾಯಿತು. ತನ್ನ ಅತ್ತೆ ತನ್ನ ಮನೆಗೆ ಬಂದಾರೇ, ಬೇರೆಯೇ ಇದ್ದಾರೇ? ತವರಿಗೆ ಹೋದಾರೇ? ತವರಿಗೆ ಹೋದರೆ ಮುಪ್ಪಿನ ಅಜ್ಜಿಯಾದರೂ ತನ್ನ ಕಡೆಗೆ ಬಂದಾಳಷ್ಟೆ. ತಮ್ಮನ್ನೆಲ್ಲ ಲಾಲಿಸಿ ಪಾಲಿಸಿದಾಕೆ ಅವಳು. ಮುಪ್ಪಿನಲ್ಲಿ ಅವಳ ಸೇವೆ ತನಗೆ ದೊರೆಯಬಹುದಲ್ಲವೆ? ತನ್ನ ತಮ್ಮಂದಿರಿಗೆ ಆಕೆಯನ್ನು ಕರೆದುಕೊಂಡು ಹೋಗಲು ಬಿಡಲಾಗದು. ಅವಳು ತನ್ನಲ್ಲಿಯೇ ಹೆಚ್ಚಿನ ಪ್ರೀತಿ ಇಟ್ಟವಳು

ಎಂದು ಚಿಂತಿಸಿದ. ಅತ್ತೆ ಮಾತ್ರ ಏನು ಮಾಡಬಹುದೆಂದು ಅವನಿಗೆ ಹೊಳೆಯದು. ತನ್ನ ಹೆಂಡತಿ—ಅವರ ಮಗಳು—ಮುಗ್ಧೆ. ಅವಳು ಕರೆಯ ಲಾರಳು, ಬಿಡಲಾರಳು. ಛೆ! ಎಂಥ ಹೊತ್ತು ತಂದೆ ದೇವಾ! ಇವೆಲ್ಲ ತೊಡಕು ಹೇಗೆ ಬಿಡಬೇಕು?

ಹುಬ್ಬಳ್ಳಿ ಬಂತು. ಬೇಗ ಬರಲಿ ಎಂದ ಇಬ್ಬರಿಗೂ ಯಾಕೆ ಬಂತು ಎನ್ನುವಂತಾಯಿತು. ಮುಂದೆ ಎದುರಿಸಬೇಕಾದ ಪ್ರಸಂಗಕ್ಕೆ ಇಬ್ಬರೂ ಹೆದ ರಿದ್ದರು. ಅಂತೂ ಇಳಿದು ಒಂದು ಟಾಂಗಾ ಹತ್ತಿ 'ರೇಲ್ವೇ ಆಫೀಸಿಗೇ ಹೊಡೆ' ಎಂದರು. ಬಾಬೂರಾಯ ತಡವರಿಸುತ್ತ ಟಾಂಗಾ ಏರಿದ. ಅಳ ಲಾರದೆ ಬಿಗಿಹಿಡಿದ ತುಟಿಗಳು ಬಿಚ್ಚಿಕೊಂಡವು.

ಬಿಂದೂರಾಯ ಅಭಯಹಸ್ತವಿಟ್ಟಂತೆ ಹೆಗಲಮೇಲೆ ಕೈಹಾಕಿದ. ಇವನ ಹೆಂಡತಿಯನ್ನು ತಮ್ಮ ಮಗಳಿಗೆ ಏನೂ ಕಡಿಮೆಯಿಲ್ಲದೆ ನೋಡಿಕೊಂಡ ವರು ಬಂಡೇರಾಯರು ಅವಳು ಕೇಳಿದರೆ ಯಾರಿಗೂ ಕಡಿಮೆಯಿಲ್ಲದಷ್ಟು ದುಃಖಿಸುವಳು. ಎಂಬುದನ್ನು ನೆನೆದು ಇವನಿಗೂ ದುಃಖ ಒತ್ತರಿಸಿತು. ಇವನ ಇಬ್ಬರು ಮಕ್ಕಳನ್ನು ಕಂಡರೆ ಬಂಡೇರಾಯರಿಗೆ ಪಂಚಪ್ರಾಣ. ಬಿಂದೂರಾಯನ ಮಡದಿ ಬಾಲಿನಿ ಮೊದಲ ಹೆರಿಗೆಗೆ ಮಾವನ ಮನೆಗೇ ಹೋಗಿದ್ದಳು. ಹುಟ್ಟಿದ ಮಗುವಿಗೆ ತುಂಬ ಕಾಯಿಲೆಯಾಗಿತ್ತು. ಆಗ ಬಂಡೇರಾಯರು ಧೈರ್ಯಸಾಲದೇ ಬಿಂದೂರಾಯನನ್ನು ಕರೆಸಿಕೊಂಡು ತಮ್ಮಲ್ಲಿಯೇ ಇರಿಸಿ ಕೊಂಡಿದ್ದರು. ತಮ್ಮ ಕಚೇರಿಯನ್ನು ಬಿಟ್ಟು ಮೂರು ತಿಂಗಳು ಸೊಸೆಯ ಬಾಣಂತಿತನದ ರಜೆಯನ್ನು ತಾವೂ ಪಡೆದಿದ್ದರು.

ಆಫೀಸಿನ ಹತ್ತಿರ ಟಾಂಗಾ ಬಂತು. ಬಾಬೂರಾಯ ಇಳಿಯಲಾರದೆ ಬಿದ್ದುಬಿಟ್ಟ. ಬಿಂದೂರಾಯ ಎಬ್ಬಿಸಿ ಒಳಗೆ ಕರೆದೊಯ್ದ. ಬಿಂದೂರಾಯನಿಗೆ ಆ ಆಫೀಸಿನ ಪರಿಚಯವಿಲ್ಲ. ಬಾಬೂರಾಯ ಅಲ್ಲಿದ್ದ ಕಾವಲುಗಾರನನ್ನು ಏನು ಕೇಳಬೇಕು? ಬಂಡೇರಾಯರನ್ನು ಕೇಳುವಂತಿಲ್ಲ. ಅಲ್ಲಿಯ ವಾತಾ ವರಣವೇ ವಿಚಿತ್ರವಾಗಿತ್ತು. ಯಾರು ಸತ್ತರೂ ಕಚೇರಿ ನಡೆಯಬೇಕಷ್ಟೆ!

ಇತ್ತ ಅಮರಗೋಳದಿಂದ ಅತ್ತೆ ಸೊಸೆ ಬಾಬೂರಾಯ ತಪ್ಪಿಸಿಕೊಂಡ ಗಾಡಿಯನ್ನೇ ಹಿಡಿದು ಹುಬ್ಬಳ್ಳಿಗೆ ಬಂದು ಮನೆಗೆ 'ಹೊಡೆದು'ಕೊಳ್ಳುತ್ತಲೇ ಹೋಗಿದ್ದಾರೆ. ಮನೆಯಲ್ಲಿದ್ದ ಆ ಅತ್ತೆ ಸೊಸೆ ಗಾಬರಿಯಾಗಿ ಇವರನ್ನು ಅಳುತ್ತಲೇ ಎದುರುಗೊಂಡಿದ್ದಾರೆ. ಆ ತಾಯಿ-ಮಗಳು ಈ ತಾಯಿ ಮಗಳು ಒಬ್ಬರ ತೆಕ್ಕೆಯಲ್ಲೊಬ್ಬರು "ಅಯ್ಯೋ-ಅಯ್ಯೋ" ಅನ್ನುತ್ತಿದ್ದಾರೆ. ಬಂಡೇರಾಯರ ತಾಯಿ, ಹೆಂಡತಿ "ಬಾಬೂ-ಬಾಬಾ"—ಎಂದು ಹಾಡಿದರೆ ಅವರ ತಂಗಿ "ಬಂಡಣ್ಣಾ-ಅಯ್ಯೋ" ಎಂದು ಗೋಳಾಡುತ್ತಿದ್ದಾಳೆ. ಬಾಬೂರಾಯನ ಹೆಂಡತಿ ಗಂಗಾ "ಅಯ್ಯೋ—ಅಪ್ಪಾ" ಎನ್ನುತ್ತಿದ್ದಾಳೆ. ಬಾಬೂರಾಯನಿಗೇನೋ ಆಗಿದೆಯೆಂದು ಅವರು, ಬಂಡೇರಾಯ ಹೋದನಲ್ಲಾ ಎಂದು ಇವರು ಬಡಿದುಕೊಳ್ಳುತ್ತಿದ್ದಾರೆ. ಬಾಬೂರಾಯನ ಕೈಕೂಸು ಚೀರಿಕೊಳ್ಳುತ್ತಲಿದೆ. ಸುತ್ತಲಿನ ಸಾಹೇಬರ ಮನೆಯವರು ಮಾತ್ರ ನಿಂತು ಈ ಗೋಳಾಟ ನೋಡುತ್ತಿದ್ದಾರೆ. ಏನಾಗಿದೆಯೆಂದು ತಿಳಿಯಲು ಅವರು ತವಕಪಡಲಿಲ್ಲ; ಇವರ ಸಮಾಧಾನಕ್ಕೂ ಮುಂದೆ ಬರಲಿಲ್ಲ.

ಅಷ್ಟು ಹೊತ್ತಿಗೆ ಬಂಡೇರಾಯ, ಬಾಬೂರಾಯ, ಬಿಂದೂರಾಯ ಮನೆಗೆ ಬಂದರು! ಹೆಂಗಸರು ತಮ್ಮ ಕಣ್ಣು ನಂಬಲಾರದೆ ನೀರು ಒರೆಸಿಕೊಂಡು ನೋಡುತ್ತಿದ್ದಾರೆ! ಅವು ಜೀವಂತ ಪ್ರೇತಗಳೆಂದುಕೊಂಡಿದ್ದರೋ ತಿಳಿಯದು! ಅವರೆಲ್ಲ ಆಸೆ-ನಿರಾಶೆಯ ಉಯ್ಯಾಲೆಯಲ್ಲಿ ಜೀಕಾಡುತ್ತಿದ್ದಾರೆ.

ಆದದ್ದಿಷ್ಟು: ಯಾರೋ ದೂರದ ಸಂಬಂಧಿ ಮುಕ್ತಿನಸಾಯುಜ್ಯಕೆ ಸೇರಿಕೊಂಡದ್ದು ಅಂದೇ ಬಂಡೇರಾಯರಿಗೆ ತಿಳಿದಿತ್ತು. [illegible] ಅಂದೇ ನೀರು ಹಾಕಿಕೊಳ್ಳಬೇಕು. ಅಂದೇ ಕಡೆಯದಿನ ಇವನ್ನು ಅಂದೇ ತೀರಿಸಲು ಮುದುಕಿ ಮಗನಿಗೆ ಆಜ್ಞಾಪಿಸಿದ್ದಳು. ಮಗ ತನ್ನ ಬಾಲಿಶ್ಯೆಂಬಂತೆ ಒಬ್ಬ ಕಾರಕೂನನಿಗೆ ಹೇಳಿದ—"ಬಂಡೇರಾಯರು ಒಂದು ಸತ್ತ ಸುದ್ದಿ ಹೇಳುವದಿದೆ. ಬಾಬೂರಾಯರನ್ನು ಫೋನಿನಲ್ಲಿ ಕರೆ" ಎಂದು ಹೇಳಿದರೆ ಒಂದು ಹೋಗಿ ಬಂಡೇರಾಯರೇ ಸತ್ತ ಸುದ್ದಿ ಹೋಗಿ ಬಿಟ್ಟಿತು. ಬಂಡೇರಾಯರಿಗೆ ಆ ಅನರ್ಥ ಮುಂದೆ ತಿಳಿದಾಗ ಮಾತು ಮಿಂಚಿತ್ತು. ಅತ್ತ ಬಾಬೂರಾಯ ಇದ್ದಿಲ್ಲ. ಮನೆಯವರು ಹೊರಟು ಆಗಿತ್ತು.

ಬಿಂದೂರಾಯ ಧಾರವಾಡದಲ್ಲಿ ಮನೆಗೆ ಸುದ್ದಿ ಕಳಿಸಿದ್ದನಷ್ಟೆ. ಅವನ ಅಣ್ಣ-ತಾಯಿ ಮರುಮೋಟರಿಗೇ ಬಂದಿಳಿದರು. ಅವರು ದಾರಿಯಲ್ಲಿ ಬಂಡೇರಾಯರ ಕಚೇರಿಯ ಒಬ್ಬರನ್ನು ಕೇಳಿದರೆ ಒಂದು ಗಂಟೆಯ ಹಿಂದೆ ಬಂಡೇರಾಯರನ್ನು ನೋಡಿದ ಆ ಗೃಹಸ್ಥನೂ ಅದನ್ನು ಮರೆತು ಇವರ ಬಂಗಾಲ್ಲಿಯೇ ಹತ್ತಿ ಬರಬೇಕೆ? 'ಏನಯ್ಯಾ-ನೀನೂ 'ಸುಳ್ಳು' ಎನ್ನಲಾಗದೇ' ಎಂದರೆ 'ಹೇಗೆನ್ನಲಿ? ನೀನು ಗಂಟೆಯಲ್ಲಿಯೇ ಸಾಯಲಾರೆಯಾ?' ಎನ್ನುತ್ತಾನೆ ಅವನು.

ಬಿಂದೂರಾಯನ ತಾಯಿ ಪೀಡೆ ಪರಿಹಾರವಾಯಿತೆಂದರು. ಬಾಬೂನ ಕೈಚೀಲದಲ್ಲಿದ್ದ ತೆಂಗಿನ ಕಾಯನ್ನು ನೋಡಿ ಅವನ ತಾಯಿ ಅಣ್ಣನ ಮೇಲೆ ನಿವಾಳಿಸಿ ಚಲ್ಲಿದಳು.

ಸತ್ತು ಬದುಕಿದ ಬಂಡೇರಾಯ ನಗಲು ತವಕಿಸುತ್ತಿದ್ದರೆ, ಉಳಿದವರು ಅಳು ನಿಲ್ಲಿಸಲು ಯತ್ನಿಸುತ್ತಿದ್ದರು. ಈ ಸ್ತಬ್ಧತೆಯನ್ನು ನೋಡಿ ಬಾಬೂರಾಯನ ಮಗ ವಸಂತ ಅಂದೇ ಕಲಿತಿದ್ದ 'ಆಹಾಹಾಹಾ' ಎಂದು ನಕ್ಕು ಎಲ್ಲರನ್ನೂ ನಗಿಸಿದ.

# ಸಮಾಜ ಪುರುಷ

೧

ಹತ್ತು ವರುಷಗಳ ಹಿಂದಿನ ಮಾತು. ನಾನಿನ್ನೂ ಹೈಸ್ಕೂಲಿನಲ್ಲಿ ಓದುತ್ತಿದ್ದೆ. ದೀಪಾವಳಿ ಸರಿದಿತ್ತು. ಒಂದು ರಾತ್ರಿ ನಾವು ನಮ್ಮ ನಡು ಮನೆಯಲ್ಲಿ ಪಗಡೆಯಾಡುತ್ತಿದ್ದೆವು. ಮುಂಚಿನ ಬಾಗಿಲು ಮುಂದ ಮಾಡಿತ್ತು. ಆಟ ಒಳ್ಳೇ ಭರಕ್ಕೆ ಬಂದಿತ್ತು. ನಾವು ಆಟದ ಆಗು-ಹೋಗು ಗಳಲ್ಲೇ ಮುಳುಗಿ ತೇಲುತ್ತಿದ್ದಾಗ "ಛಪ್–ಛಪ್" ಎಂದು ಯಾರೋ ಹೊಡೆಯುತ್ತಿದ್ದ ಸದ್ದು ಕೇಳಿತು. ಆ ಸದ್ದಿನ ಹಿಂದೆಯೇ "ಅಯ್ಯೋ-ಸತ್ತೆ" ಎಂಬ ಆಕ್ರೋಶವು ಕೇಳಿಬಂತು.

ಆಟ ಅಷ್ಟಕ್ಕೇ ನಿಲ್ಲಿಸಿ ಧಾವಿಸಿ ಬಾಗಿಲು ತೆರೆದು ನೋಡುತ್ತೇನೆ: ಎದುರು ಮನೆಯ ಅನಂತ ಕುಣಿದಾಡಿ ಅಳುತ್ತ ಅಂಗಳಕ್ಕೆ ಇಳಿದಿದ್ದಾನೆ ಅವರ ಮನೆಯ ಬಾಗಿಲಲ್ಲಿ ಅವರ ತಂದೆ ಭೀಮಾಚಾರ್ಯರು ದಂಡಧಾರಿ ಗಳಾಗಿ ನಿಂತಿದ್ದಾರೆ ಅವರ ಉಗ್ರ ಸ್ವರೂಪ ಬೀದಿಯ ದೀಪದ ಮಸುಬೆಳಕಿ ನಲ್ಲಿಯೂ ಕ್ರೂರವಾಗಿ ಕಾಣುತ್ತಿತ್ತು

ನಮ್ಮ–ಅವರ ಮನೆಯ ಮುಂದೆ ಐವತ್ತು ಗಜದ ರಸ್ತೆ. ಅವರ ಮನೆ ಯಲ್ಲಿ ಅನಂತ ತಿಂದ ಪೆಟ್ಟು ನಾವು ಬಾಗಿಲು ಹಾಕಿ ಆಟದಲ್ಲಿ ಮುಳುಗಿದವ ರಿಗೂ ಕೇಳಬೇಕೆಂದರೆ! ಭೀಮಾಚಾರ್ಯರನ್ನು ನೋಡಿ, ನಾವು ಅನಂತ ನನ್ನು ಕರೆದು ಸಂತಯಿಸುವ ಧೈರ್ಯವನ್ನೂ ಕಳೆದುಕೊಂಡಿದ್ದೆವು. ಅನಂತನ ಅಳು ನಮ್ಮ ಮನಸ್ಸನ್ನು ಭೇದಿಸಿತ್ತು. ಆ ಮಬ್ಬುಗತ್ತಲೆಯಲ್ಲಿ ಆಚಾರ್ಯರ ವಿಕಾರವಶ ರೂಪ ಕಣ್ಣಲ್ಲಿ ನೆಟ್ಟಿತ್ತು.

* * * *

ಭೀಮಾಚಾರ್ಯರು ಹೆಸರಿಗೆ ತಕ್ಕಂತೆ ಭೀಮಕಾಯರೇ. ಒಳ್ಳೆ ಮೈಕಟ್ಟಿನ ವ್ಯ. ತುಂಬಿದ ಮುಖ. ಎತ್ತರದ ಆಳು. ಮುಖದ ಮೇಲೆ ಪೌರುಷದ ಸಂಕೇತವಾಗಿ ಮೀಸೆ ಸದಾ ಹುರಿಗೊಂಡಿರುವುದು. ಸುಖದಿಂದ

ಬೆಳೆದ ದೇಹಯಷ್ಟಿ. ಒಳ್ಳೆಯ ನಿಷ್ಠಾವಂತ ಬ್ರಾಹ್ಮಣ! ನಸುಕಿನಲ್ಲಿ ಎದ್ದು ಎರಡು ಮೈಲು ದೂರದ ಅಡವಿಗೆ ಹೋಗಿ ನೂರು ದಳವಾದರೂ ತುಳಸಿ ತಂದು ಒಂದು ಗಂಟೆಯ ಶಾಲಿಗ್ರಾಮದ ಪೂಜೆಗೆ ಮಾರ್ಗ ಮಾಡಿ ಕೊಳ್ಳುವರು.

ನಡು ಹರೆಯದಲ್ಲಿಯೇ ಆಚಾರ್ಯರು ವಿಧುರರಾದರು. ಇವರ ತಾಳಕ್ಕೆ ಕುಣಿಯಲಾಗದೆ ಕುಣಿದು ದಣಿದ ಭಾಗೀರಥಿಬಾಯಿ, ಎರಡು ಗಂಡು, ಒಂದು ಹೆಣ್ಣು—ಹೀಗೆ ಮೂರು ಮಕ್ಕಳನ್ನು ಇವರಿಗೆ ಬಿಟ್ಟು ಕಣ್ಣು ಮುಚ್ಚಿದ್ದಳು. ನನಗೇನು ಅವರನ್ನು ನೋಡಿದ ನೆನಪಿಲ್ಲ. ಆದರೆ ನಮ್ಮ ತಾಯಿ ತನ್ನ ಆ ಗೆಳತಿಯ ನೆನಪನ್ನು ಆಗಾಗ ಎತ್ತಿ ಆಡುತ್ತಾರೆ. ರತಿಯಂಥ ಹೆಣ್ಣು ಭಾಗೀರಥಿ. ಅವಳ ಸುಕುಮಾರ ಅಂಗಕಾಂತಿಯನ್ನು ಅವಳ ಮಗಳು ಯಮುನಾ ಹೊತ್ತು ಬಂದಿರುವಳಾದರೂ, ಮುಖದ ಹೋಲಿಕೆ ಅವಳದೇ ಆದರೂ ಅವಳ ಕಣ್ಣಿನ ಕಾಂತಿ, ಅವಳ ಕಂಠದ ಮಾಧುರ್ಯ, ನಡೆ-ನುಡಿಯ ಚೆಲ್ಲಾಟ ಅವಳಿಗೇ ಮೀಸಲಾದದ್ದು. ಅಂಥ ಗೌರಿಯನ್ನು ಪಡೆದ ಈ ಭೀಮಾಚಾರಿಗೆ ಅವಳನ್ನು ಉಳಿಸಿಕೊಳ್ಳುವ ಭಾಗ್ಯವಿರಲಿಲ್ಲ. ನಾಲ್ಕನೆಯ ಹೆರಿಗೆಯ ಕಷ್ಟದಲ್ಲಿ ಕಣ್ಮುಚ್ಚಿದಳು. ದವಾಖಾನೆಗೆ ಹಾಕಿದ್ದರೆ ಅವಳು ಉಳಿಯಬಹುದಾಗಿತ್ತು. ಆದರೆ ಈ ಕರ್ಮಠ ಆಚಾರಿ ಮನೆ ಯಲ್ಲಿಯೇ ಹೆರಿಗೆ ಮಾಡಿಸಿ, ಡಾಕ್ಟರರನ್ನು ಕರೆಸದೆ, ದಾಯಿಯನ್ನೂ ಬರ ಗೊಡದೆ ಅವಳನ್ನು ನೀಗಿದ—ಎಂದು.

ಭೀಮಾಚಾರ್ಯರು ತಮ್ಮ ದೈನಂದಿನ ಕಾರ್ಯಾಚರಣೆಯನ್ನು ಎಂಥ ವಿಪತ್ತು ಬಂದರೂ ಬಿಟ್ಟವರಲ್ಲ. ಮಳೆ ಬರಲಿ; ಚಳಿ ಇರಲಿ—ಬಾವಿಯ ಮೇಲೆ ಸ್ನಾನ; ಒಂದು ತಾಸಿನ ಆಹ್ನೀಕ-ಅಡಿಗೆ. ಮನೆಯ ಕೆಲಸ ಎಲ್ಲಾ ಕೈಯಾರೆ ಮಾಡುವರು. ಎಲ್ಲಾ ಕ್ರಮವಾದ ದಿನಚರಿ. ಆ ಮಕ್ಕಳ ಲಾಲನೆ ಪಾಲನೆಯನ್ನೂ ತಾವೇ ವಹಿಸಿಕೊಂಡಿದ್ದಾರೆ. ಬೇನೆ ಬೇಸರಗಳು ಅವರಿ ಗಾಗಲಿ, ಮಕ್ಕಳಿಗಾಗಲಿ ಬರುವದು ಅಪರೂಪವೇ. ಅನಂತ ನನ್ನ ಸಹಪಾಠಿ. ಆದರೆ ನಾನು ಹೈಸ್ಕೂಲು ಸೇರಿದಾಗ ಅವನು ಮನೆಯಲ್ಲಿಯೆ ಉಳಿದ. ಇಂಗ್ಲೀಷು ಶಾಲೆಗೆ ಮಗನನ್ನು ಕಳಿಸಲು ಅವರ ತಂದೆ ಒಪ್ಪಲಿಲ್ಲ. ಮನೆಯ ಲ್ಲಿಯೇ 'ವೈದೀಕಿ'ಯನ್ನು ಹೇಳುವರು. ಸದಾ ಮನೆಯಲ್ಲಿಯೇ—ತಂದೆಯ

ಸಮಕ್ಷಮದಲ್ಲಿಯೇ--- ಅವನು " ಸಹಸ್ರಶೀರ್ಷಾ.... " ರಾ ಹಾಕುತ್ತಾನೆ. ಅವನಿಗೂ ನಮ್ಮ ಕೂಡ ಶಾಲೆಗೆ ಬರುವ ಚಪಲ. ಆದರೆ ಅವನ ತಂದೆ ಅವನನ್ನು ಹಾಯಗೊಡಬೇಕಲ್ಲ! ಅನಂತನ ಅಣ್ಣ ಕೃಷ್ಣ. ತಂದೆಯ ಈ ಹಟವಾದಿತನ ಸಹಿಸಲಾರದೆ ಒಂದು ದಿನ ಜಗಳಾಡಿ ಮನೆಬಿಟ್ಟು ಹೋದವ ತಿರುಗಿ ಬಂದೇ ಇಲ್ಲ.

ಅವರ ಮನೆಯಲ್ಲಿ ಒಂದು ಆಕಳು: ಎರಡು ಕರು. ಆಕಳು ಮೈತುಂಬಿ ಕೊಂಡು ನಮ್ಮ ಓಣಿಯ ದನಗಳಲ್ಲಿ ಆಚಾರ್ಯರದೆಂದು ಎತ್ತಿ ತೋರಿಸುವಂತಿತ್ತು. ಅವರಿಗೆ ಅದರ ಸೇವೆಯಲ್ಲಿ ಬಹಳ ಶ್ರದ್ಧೆ. ಒಮ್ಮೊಮ್ಮೆ ಸಂಜೆ ಮನೆಗೆ ಬರುವ ಆಕಳು ತಡಮಾಡಿದರೆ ಆಚಾರ್ಯರು ಅಡವಿಗೂ ಹೋಗಿ ಅದನ್ನು ಹೊಡೆದುಕೊಂಡು ಬರುತ್ತಾರೆ

ಈ ದನದ ಮೇಲಿನ ಪ್ರೀತಿ ಮನೆಯ ಮಕ್ಕಳಲ್ಲಿ ಇಟ್ಟಿದ್ದರೆ ಕೃಷ್ಣ ಯಾಕೆ ಓಡಿಹೋಗುತ್ತಿದ್ದ ?— ಎಂದು ನಮ್ಮ ತಂದೆ ಅನ್ನುತ್ತಾರೆ. ಆದರೆ ನಾನು ನೋಡಿದಂತೆ ಅನಂತನ ಮೇಲೆ ಆಚಾರ್ಯರಿಗೆ ಎಣೆಯಿಲ್ಲದ ಪ್ರೀತಿಯಿದೆ. ಸಂಜೆ ನಾವು ಆಟದ ಬಯಲಿನಿಂದ ಬರುವುದು ತಡವಾದರೆ ಆಚಾರ್ಯರು ಕಂದೀಲು ಹಿಡಿದು ಅಲ್ಲಿ ಅವತರಿಸಿದ್ದನ್ನು ನಾನು ಅನೇಕ ಸಲ ನೋಡಿದ್ದೇನೆ. ಅನಂತನಿಗೆ ಅವರು ಕೊಡುವ ತುಪ್ಪ ಸಕ್ಕರೆಯ ತಿನಿಸಿನಲ್ಲಿ ನಾನೂ ಪಾಲುಗೊಂಡಿದ್ದೇನೆ. ಆದರೆ ಅವರ ಶಿಸ್ತನ್ನು ಭಂಗಿಸಿದ ಅನಂತನನ್ನು ಶಿಕ್ಷೆಯಿಂದ ಉಳಿಸುವುದು ಅವರ ಪಿತೃತ್ವಕ್ಕೂ ಮೀರಿದ ಮಾತಾಗಿತ್ತು.

* * * *

ಅಂದು ಆ ತಾಡನೆಗೆ ಒಂದು ಕ್ಷುಲ್ಲಕ ವಿಷಯ ಕಾರಣವಾಗಿತ್ತು. ಆಚಾರ್ಯರು ನೆರೆಯೂರಿನ ದೇಶಪಾಂಡೆಯವರಲ್ಲಿ 'ಕರ್ಮ'ಕ್ಕೆಂದು ಹೊರಟಾಗ ಎರಡುದಿನ ಬರುವುದಿಲ್ಲವೆಂದು ಹೇಳಿದ್ದರು. ಅನಂತನೊಬ್ಬನೇ ಮನೆಯಲ್ಲಿ ಅವನ ತಂಗಿ ಯಮುನಾ ಕಳೆದವರುಷವೇ ಮದುವೆಯಾಗಿ ಅತ್ತೆ ಮನೆಯಲ್ಲಿದ್ದಾಳೆ. ಎರಡು ದಿನ ಆಕಳನ್ನೂ ಅನಂತನನ್ನೂ ನೋಡಿಕೊಳ್ಳುವಂತೆ ನಮ್ಮ ತಂದೆ-ತಾಯಿಗೆ ಹೇಳಿಹೋಗಿದ್ದರು ಆಚಾರ್ಯರು.

ನಮ್ಮ ಮನೆಗೆ ಅಂದು ಹಜಾಮ ಬಂದಿದ್ದ. ನಾನು ಕ್ಷೌರ ಮಾಡಿಸಿಕೊಂಡೆ. ಅನಂತನೂ ಅಲ್ಲೇ ನಿಂತಿದ್ದ. ಅವನ ತಲೆಯೂ ಬೆಳೆದಿತ್ತು.

‘ ನೀನೂ ಮಾಡಿಸಿಕೋ ಅನಂತ ’ ಅಂದೆ. ಅವನ ತಂದೆ ಅವನ ತಲೆಯನ್ನು ತಮ್ಮ ತಲೆಯಂತೆಯೇ ಕಾಪಾಡಿಕೊಂಡು ಬಂದಿದ್ದರು ಎರಡು ದಿನ ಅವರು ಹೇಗೂ ಬರುವದಿಲ್ಲ. ಕ್ರಾಪು ಮಾಡಿಸಿಕೊಂಡು ಮೆರೆದು ತಂದೆ ಬರುವಷ್ಟರಲ್ಲಿ ಅವನ್ನು ತೆಗೆಸಿದರಾಯಿತೆಂದು ಇಬ್ಬರೂ ಯುಕ್ತಿ ಮಾಡಿದೆವು. ಭರಮಪ್ಪ—ನಮ್ಮ ಹಜಾಮನಿಗೂ ಹೇಳಿ ಇಟ್ಟೆವು. ಆಚಾರ್ಯರಿಗೆ ಇದನ್ನೆಲ್ಲ ಹೇಳಬಾರದೆಂದು. ಅವನೂ ನಮ್ಮ ಈ ಸಣ್ಣ ಆಸೆಯನ್ನು ಪೂರೈಸುವದಾಗಿ ಮಾತುಕೊಟ್ಟ. ಅಂದು ಅನಂತನ ತಲೆ ಕ್ರಾಪಿನಿಂದ ಕಂಗೊಳಿಸಿತು. ಅವನ ಚಂಡಿಕೆ ಕತ್ತರಿಸಲು ನಾನು ಸೂಚಿಸಿದೆ. ಮುಂದಿನ ಗಂಡಾಂತರ ನೆನಸದೆ ಅನಂತನೂ ಆಗಲಿ ಅಂದ. ಆದರೆ ಭರಮಪ್ಪ ನಮ್ಮ ಹೇಳಿಕೆಯನ್ನು ನಿರಾಕರಿಸಿದ. ಬೆಳೆದ ಚಂಡಿಕೆ ಹಾಗೇ ಉಳಿಯಿತು.

ನಾವು ತಿರುಗಾಡಿ ಸಂಜೆ ಮನೆಗೆ ಬರುವಷ್ಟರಲ್ಲಿ ಅನಂತನ ಮನೆಯಲ್ಲಿ ದೀಪ ಕಂಡೆವು. ಭೀಮಾಚಾರ್ಯರು ಅಂದೇ ತಿರುಗಿ ಬರಬೇಕೆ ! ಅನಂತ ಒಂದು ಕ್ಷಣ ಗಾಬರಿಯಾದ. ನಾನೊಂದು ಯುಕ್ತಿ ಹೇಳಿದೆ: ಇಂದು ನೀನು ಟೊಪ್ಪಿಗೆಯನ್ನೇ ತೆಗೆಯಬೇಡ. ನಾಳೆ ಆಚಾರ್ಯರು ತುಳಸಿಗೆ ಹೋಗಿ ಬರುವಷ್ಟರಲ್ಲಿ ಸಲೂನಿಗೆ ಹೋಗಿ ತಲೆ ಬೆಳಗಿಸಿಕೊಂಡು ಬಂದರಾಯಿತು—ಎಂದು. ಅವನೂ ಒಪ್ಪಿದ. ಇದ್ದುದು ಒಂದೇ ಸಮಾಧಾನದ ದಾರಿ.

ಅನಂತ ನೆಟ್ಟಗೆ ತನ್ನ ಮನೆಗೆ ಹೋಗಲಿಲ್ಲ. ಆದರೆ ನಮ್ಮನ್ನು ಬಾಗಿಲಲ್ಲೇ ನೋಡಿದ ಆಚಾರ್ಯರು ಕೂಗಿಕೊಂಡರು. ಅನಂತ ಹೋಗಬೇಕಾಯಿತು. ಹೋಗುವಾಗ ‘ ತಲೆ ಶೂಲಿಯೆಂದು ತಲೆ ಹಿಡಿದುಕೋ. ಟೊಪ್ಪಿಗೆಯನ್ನು ತೆಗೆಯಬೇಡ ’ ಎಂದು ಪಿಸುಮಾತಿನಲ್ಲಿ ಸೂಚಿಸಿದೆ.

ನಮ್ಮ ಯುಕ್ತಿವಾದದಿಂದ ನಾನು ನಿಶ್ಚಿಂತನಾಗಿ ಮನೆ ಸೇರುವಂತಾಯಿತು. ಅದನ್ನು ಮೀರಿ ಅನಂತನ ತಲೆ ಆದೊಂದು ದಿನ ಹಾಗೇ ಉಳಿಯುವದೆಂದು ನನಗೆ ಭರವಸೆಯಾಗಿತ್ತು. ಊಟಮಾಡಿ ನಾವು ಪಗಡೆಗೆ ಕೂಡುವಾಗ ಅನಂತನನ್ನು ಕರೆಯಹೋದೆ. ನಮ್ಮಲ್ಲೇ ಮಲಗಿಸಿಕೊಂಡು ಮರುದಿನ ಮುಂಜಾನೆ ಅವನ ‘ ಭದ್ರಂಕದಣ ’ಮಾಡಿಸಬೇಕೆಂದೂ ಯೋಚಿಸಿದ್ದೆ. ಆದರೆ ಅವನ ‘ತಲೆಶೂಲಿ’ ಅವನನ್ನು ಏಳಗೊಡಲಿಲ್ಲ. ಭೀಮಾಚಾರ್ಯರೇ

ಹೇಳಿದರು: “ಅವನಿಗೆ ತಲೆಶೂಲಿಯಂತೆ! ಶುಂಠಿಕಷಾಯ ಮಾಡಿಕೊಟ್ಟಿ
ದ್ದೇನೆ: ಮಲಗಿದ್ದಾನೆ.” ಎಂದು. ‘ಬದುಕಿದ’ ಎಂದುಕೊಂಡು ಮರಳಿ
ಬಂದು ನಿಶ್ಚಿಂತೆಯಿಂದ ಪಗಡೆಯಾಟ ಹಚ್ಚಿದೆ.

ಅನಂತ “ಅಯ್ಯೋ—ಸತ್ತೆ—” ಎಂದಾಗ ನನಗೆ ನಮ್ಮ ಉಪಾಯ
ಒಮ್ಮೆಲೆ ಒಡೆಯಿತೆಂದು ಅನಿಸಲಿಲ್ಲ. ಆದರೆ ಬಕ್ಕತಲೆಯಿಂದ ಅಂಗಳದಲ್ಲಿ
ಕುಣಿದಾಡುತ್ತಿರುವ ಅನಂತನನ್ನು ನೋಡಿದಾಗ ‘ದೇವರು ನಮ್ಮ ಮೊರೆ
ಕೇಳಲಿಲ್ಲ’ ಎಂದುಕೊಳ್ಳಬೇಕಾಯಿತು

ನಮ್ಮ ತಂದೆ ಹೋಗಿ ಅನಂತನನ್ನು ಸಂತಯಿಸಲೆತ್ನಿಸಿದರು. ‘ಹೊಲೆ
ಯರ ಸಹವಾಸ’ ಎಂದು ಆಚಾರ್ಯರು ಗರ್ಜಿಸಿದರು “ಏನಾಯಿತೋ
ಆಚಾರಿ” ಎಂದು ನಮ್ಮ ತಂದೆ ಕೇಳಿದರೆ “ಆ ತಲೆ ನೋಡಿರಿ; ‘ತಲೆಶೂಲಿ’
ಬರದೇನು ಮಾಡೀತು?” ಎಂದರು.

ಇಂಥ ಪ್ರಸಂಗ ನಮಗಾಗಲಿ ಅನಂತನಿಗಾಗಲಿ ಹೊಸದೇನೂ ಅಲ್ಲ.
ಆಗಾಗ ಭೀಮಾಚಾರ್ಯರ ಇಂಥ ಯಮದಂಡನೆಗೆ ಅವರ ಮಕ್ಕಳು ಗುರಿ
ಯಾಗುವದನ್ನು ನಾವು ಅನೇಕ ಸಲ ಕಂಡಿದ್ದೇವೆ. ನಮ್ಮ ತಂದೆ ಒಂದು
ಅವರಿಗೆ ಚೆನ್ನಾಗಿ ‘ಛೀ’ ಹಾಕಿದರೆ “ಮನೆತನದ ಮರ್ಯಾದೆ ಬ್ರಾಹ್ಮಣ್ಯ
ಉಳಿಯಬೇಕೋ ಬೇಡವೋ” ಎಂದು ಕಿರಿಚಿಕೊಂಡರು ಆಚಾರ್ಯರು.
“ಸುಟ್ಟಿತು ನಿನ್ನ ಬ್ರಾಹ್ಮಣ್ಯ” ಎಂದು ನಮ್ಮ ತಂದೆ ಅಂದರೆ “ನಮ್ಮ
ಮನೆಯ ಕಾರಭಾರ ನಿಮಗೆ ಬೇಡ” ಎಂದರಚಿದರು.

೨

ಯಮುನಾ ನನ್ನ ತಂಗಿ ಯಶೋದಾನ ಓರಗೆಯ ಗೆಳತಿ ಯಶೋದಾ
ಇನ್ನೂ ಶಾಲೆಗೆ ಹೋಗುತ್ತಾಳೆ. ಅವಳ ಮದುವೆಯ ವಿಚಾರ ನಮ್ಮ ಮನೆ
ಯಲ್ಲಿ ಇನ್ನೂ ನಡೆದಿಲ್ಲ. ಯಮುನಾನ ಅಭ್ಯಾಸ ನಿಲ್ಲಿಸಿ ಕಳೆದ ವರುಷವೇ
ಆಚಾರ್ಯರು ಅವಳ ಮದುವೆ ಮಾಡಿದರು. ಮದುವೆಯಾಗಿ ಗಂಡನ ಮನೆ
ಸೇರಿದ ಯಮುನಾ ಒಮ್ಮೆಯೂ ತವರಿಗೆ ಬಂದಿಲ್ಲ. ಪಂಚಮಿಗೆ ಮಗಳನ್ನು
ಕರೆಸಬೇಕು ಎಂದು ನಮ್ಮ ತಾಯಿ ಸೂಚಿಸಿದಾಗ ಬೆಳಗಾವಿಗೆ ಅನಂತನನ್ನು
ಕಳಿಸಿದ್ದರು ಆಚಾರ್ಯರು. ಅವನು ಹಾಗೇ ತಿರುಗಿ ಬಂದ. ಯಮುನಾನ
ಅತ್ತೆ ಕಳಿಸಲಿಲ್ಲವೆಂದಂತೆ! ‘ಕೊಟ್ಟ ಹೆಣ್ಣು ಕುಲಕ್ಕೆ ಹೊರತು’ ಎಂದು

ಆಚಾರ್ಯರು ತಾವು ತಲೆ ಹಿಡಿದು ಕುಳಿತಿದ್ದರು. ಯಮುನಾ ಏನೇನೋ ಹೇಳಿ ಅನಂತನ ಮುಂದೆ ಬಹಳ ಅತ್ತಳಂತೆ. ಅನಂತ ಅಳುತ್ತ ನಮ್ಮ ತಾಯಿಯ ಮುಂದೆ ಹೇಳಿದ. "ಪರದೇಶಿ ಮಗಳು! ತಾಯಿಯಿದ್ದರೆ ಅದೆಷ್ಟು ಮರುಗುತ್ತಿದ್ದಳೋ! ತಾನೇ ಹೋಗಿ ಕರಕೊಂಡು ಬರುತ್ತಿದ್ದಳು" ಎಂದು ನಮ್ಮ ತಾಯಿ ಭಾಗೀರಥೀಬಾಯಿಯನ್ನು ನೆನಸಿ ಕಣ್ಣೀರು ತಂದಾಗ ಅನಂತ "ಅವಳು ಅಲ್ಲಿಯಾದರೂ ಸುಖವಾಗಿದ್ದರೆ ಸಾಕು. ಅವಳಿಲ್ಲಿ ಬರುವದೂ ಬೇಡ; ಅವರು ಕಳಿಸುವದೂ ಬೇಡ" ಎಂದ.

ಈ ದೀಪಾವಳಿಗೆ ಯಮುನಾನನ್ನು ಕರೆಯಲು ಆಚಾರ್ಯರೇ ಹೋಗಿದ್ದರು. ಇವರ ಮುಂದೆ ಅವಳ ಅತ್ತೆ ಒಂದು ಬುಟ್ಟಿ ಬೈಗಳನ್ನು ತೂರಾಡಿದರಂತೆ! "ಎಂಥವರ ಮಗಳು ನಮಗೆ ಗಂಟುಬಿದ್ದಳೆ"ಂದು ಯಮುನೆಯನ್ನು ಬೈಯುವ ಭರದಲ್ಲಿ ಆಚಾರ್ಯರಿಗೂ ಪ್ರಸಾದ ದೊರೆಯಿತಂತೆ! "ತಾಯಿಯಿಲ್ಲದ ಹುಡುಗಿ ನಾನು ಪ್ರೀತಿಯಿಂದ ಬೆಳಸಿದ್ದೇನೆ. ಕೆಲಸ ಹೇಳಿ ಮಾಡಿಸಿಕೊಳ್ಳಿರಿ. ಇನ್ನವಳು ನಿಮ್ಮ ಮಗಳು" ಎಂದು ಆಚಾರ್ಯರು ಹೇಳಿಕೊಂಡರಂತೆ! "ಆ ಕಡೆಗೇ ಕರೆದುಕೊಂಡು ಹೋಗಿರಿ. ನಮಗೆ ಈ ಹುಡುಗಿ ಬೇಡ" ಎಂದರಂತೆ ಬೀಗಿತ್ತಿ. ಆಚಾರ್ಯರು ಏನು ಮಾಡಬೇಕು? "ಅವಳು ನಿಮ್ಮ ಮನೆಯಲ್ಲಿಯೇ ಸಾಯಲಿ"—ಎಂದು ಬಿರ್ರನೆ ಬಂದುಬಿಟ್ಟರು.

ಬಂದಮೇಲೆ ನಮ್ಮ ತಂದೆಯ ಮುಂದೆ ಹೇಳುವಾಗ ನಮ್ಮ ತಾಯಿ ನಡುವೆ ಹೋಗಿ "ದೀಪಾವಳಿಗೆಂದು ಅಳಿಯನನ್ನೂ ಕರೆಯಬೇಕಾಗಿತ್ತು. ಏನಾದರೂ ಆಸೆಗೆ ಕಳಿಸುತ್ತಿದ್ದರು. ಇಲ್ಲಿ ಅವನಿಗೆ ಬುದ್ಧೀ ಹೇಳಿ ಕಳಿಸಬಹುದಿತ್ತು"—ಎಂದರು. "ನನಗೆ ಅದು ಹೊಳೆಯಲಿಲ್ಲವಾ, ನನಗೆ ಹೇಗೆ ತಿಳಿಯಬೇಕು? ಆಕೆ ನನ್ನ ತಲೆಗೆ ಇದನ್ನೆಲ್ಲ ಕಟ್ಟಿ ಹೋದಳು-" ಎಂದು ಹೆಂಡತಿಯನ್ನು ನೆನಸಿ ಕಣ್ಣೀರು ತೆಗೆದರು ಆಚಾರ್ಯರು. "ಗಂಡನ ಕೂಡ ಹೇಗಿದ್ದಾಳೋ-" ಎಂದು ಅವ್ವ ಅಂದುಕೊಂಡಳು. "ನಾನು ಹೇಗೆ ಕೇಳಲವ್ವಾ, ಅವಳೇ ಬಾದಿದ್ದರೆ ನಿಮಗೆ ಒಡಲುಗೊಟ್ಟು ಹೇಳುತ್ತಿದ್ದಳೇನೋ!" ಎಂದರು.

ಯಶೋದಾಗೆ ಎಂಥ ಮನೆ ದೊರೆಯುವದೋ ಎಂದು ನಮ್ಮತಾಯಿ ಅಂದೇ ಅಧೀರಳಾಗಿ “ನೋಡು, ಯಶೂ—” ಎಂದು ಅವಳನ್ನು ಎಳೆದು ತಬ್ಬಿಕೊಂಡಳು. ಯಶೋದಾಗೆ ಯಮುನಾ ಬರಲಿಲ್ಲವೆಂದು ಬಹಳ ಹಳ ಹಳಿಯಾಯಿತು. ಅವರು ಅಚ್ಚುಮೆಚ್ಚಿನ ಗೆಳತಿಯರು. ಯಮುನಾ ಅತ್ತೆ ಮನೆಗೆ ಹೋಗುವಾಗ ಯಶೋದಾನಿಂದ ಅವಳನ್ನು ಬಿಡಿಸಿ ತರಬೇಕಾದರೆ ಕರುಳು ಕಿತ್ತಿ ತಂದಂತಾಗಿತ್ತು. ಇಬ್ಬರೂ ತಕ್ಕೆಬಿದ್ದು ಅಳುತ್ತಿದ್ದರು. ಅನಂತ ಅಳುತ್ತಿದ್ದ. ಭೀಮಾಚಾರ್ಯರು ಅಂದು ಸಪ್ಪಗಾಗಿದ್ದರು. ಯಂತ್ರ ದಂತೆ ಕೈ ಎತ್ತಿ “ಹೋಗಿ ಬಾ” ಎಂದಷ್ಟೆ ಹರಸಿದ್ದರು.

೩

ಗೌರೀ ಹುಣ್ಣಿವೆಯ ದಿನ ಮಧ್ಯಾಹ್ನ ನಾವು ಊಟಮಾಡಿ ಕೈ ತೊಳೆ ಯುವ ಹೊತ್ತಿಗೆ ಅನಂತನ ಮನೆಯಮುಂದೆ ಒಂದು ಟಾಂಗಾ ಬಂದು ನಿಂತಿತು. ಯಮುನಾ ಬಂದಳು. ಜತೆಗೆ ಅವಳ ಮಾವ ಬಂದಿದ್ದರು. ಯಮುನಾ ಬಂದಳೆಂದು ಎಂಜಲಗೈಯಲ್ಲೇ ಯಶೋದಾ ಓಡಿಹೋದರೆ ಯಮುನಾ ಅಳುತ್ತಿದ್ದವಳು ಇವಳ ಕೂಡ ಮಾತನಾಡಲಿಲ್ಲವಂತೆ! ಯಶೋದಾ ಹಾಗೇ ಬಂದು ಅಪ್ಪನ ಮುಂದೆ ಹೇಳಿದಳು.

ಮುಂದೆ ಒಂದು ತಾಸಿಗೇ ಯಮುನಾಳ ಮಾವ ರುಮಾಲ ಹಾಕಿ ಕೊಂಡು ಹೋದದ್ದನ್ನು ನಾವು ನೋಡಿದೆವು. ವಿಷಯವೇನೆಂದು ತಿಳಿಯಲಿಲ್ಲ. ದಿನಾಲು ಮಧ್ಯಾಹ್ನ ನಮ್ಮ ತಂದೆಯಕೂಡ ಹರಟೆಗೆ ಬರುವ ಆಚಾರ್ಯರು ಅಂದು ಬರಲೇ ಇಲ್ಲ. ‘ಮಗಳು ಬಂದಿದ್ದಾಳೆ; ಬಂದಿರಲಿಕ್ಕಿಲ್ಲ’ ವೆನ್ನುತ್ತ ನಮ್ಮ ತಂದೆ ತಮ್ಮ ಚಂಚಿಯಿಂದ ಒಂದೊಂದೇ ಎಲೆ ತೆಗೆದು ಕವಳ ಮೆಲ್ಲುತ್ತ ನನಗೆ ಭೀಮಾಚಾರ್ಯರನ್ನು ಕರೆಯ ಹೇಳಿದರು. ನಾನು ಹೋಗಿ ನೋಡಿದರೆ ಆಚಾರ್ಯರು ಗೋಡೆಗೆ ಅತು ದಿಙ್ಮೂಢತೆಯಿಂದ ಕುಳಿತಿದ್ದಾರೆ. ಅನಂತ ಕಟ್ಟೆಯ ತುದಿಗೆ ಗಲ್ಲಕ್ಕೆ ಕೈ ಹಚ್ಚಿ ಕುಳಿತು ಜಂತೆ ಎಣಿಸುತ್ತಿದ್ದಾನೆ. ಒಳಮನೆಯ ಬಾಗಿಲಲ್ಲಿ ಯಮುನಾ ಹೌಹಾರಿ ನಿಂತಿದ್ದಾಳೆ!

ನಾಲ್ಕು ದಿನದಮೇಲೆ ಓಣಿಯಲ್ಲಿ ಗುಜುಗುಜು ಆಯಿತು.

—ಯಮುನಾ ಇನ್ನು ಗಂಡನಮನೆಗೆ ಹೋಗುವದಿಲ್ಲವಂತೆ! ಅವನು ಅವಳನ್ನು ಬಿಟ್ಟಿದ್ದಾನಂತೆ! ಅವಳ ಮಾವ ಬಂದು ಬಿಟ್ಟುಹೋದರಂತೆ!

—ಯಮುನಾ ಅತ್ತೆಯ ಮನೆಯಲ್ಲಿ ಕೆಲಸವನ್ನೇ ಮಾಡಲಿಲ್ಲವಂತೆ! ಸುಮ್ಮನೆ ಅಳುತ್ತ ಕೂಡುತ್ತಿದ್ದಳಂತೆ! ಗಂಡನನ್ನು ಸೇರುತ್ತಿದ್ದಿಲ್ಲವಂತೆ!

—ಮೊದಲೇ ಜಗಳಗಂಟಿ ಯಮುನಾ. ಹೀಗೆ ಯಾಕೆ ಮಾಡಬೇಕು? ತನ್ನ ಕಾಲ ಮೇಲೆ ತಾನೇ ಕಲ್ಲು ಚಲ್ಲಿಕೊಂಡಳು!

—ಭೀಮಾಚಾರಿಗೆ ಬುದ್ಧಿಯಿಲ್ಲ. ಕೋಣ ಬೆಳೆದಂತೆ ಬೆಳೆದಿದ್ದಾನೆ. ಮಗಳಿಗೆ ಕೊಡುವದು ಕೊಟ್ಟು ಕಳಿಸಲಿಲ್ಲ. ಅಳಿಯನನ್ನೂ ಕರೆಯಲಿಲ್ಲ. ಮದುವೆ ಮಾಡಿ ಮಗಳನ್ನು ನೂಕಿಬಿಟ್ಟವ ಅವರ ಮನೆಯ ಕಡೆಗೆ ಸುಳಿಯಲಿಲ್ಲ!

—ಶ್ರೀಮಂತರ ಮನೆ! ಇವನ ಯೋಗ್ಯತೆಯೇನು? ಏನೋ ಲಭ್ಯ ವಿತ್ತು; ಅಂಥವರ ಕೂಡ ಶರೀರ ಸಂಬಂಧ ಬೆಳಸಿದವರು ಉಳಿಸಿಕೊಳ್ಳುವದು ಸುಮ್ಮನೆ ಅಲ್ಲ. ಅಳಿಯನಿಗೆ ವರೋಪಚಾರವನ್ನೂ ಕೊಡಲಿಲ್ಲ—ಈ ಜಿಪುಣ ಬ್ರಾಹ್ಮಣ!

—ದುಡ್ಡು ಮಾಡಿದ್ದಾನೆ. ಮಕ್ಕಳಿಗಲ್ಲದ್ದು ಏನು ಮಾಡುವದು? ಇನ್ನು ಎರಕೊಳ್ಳಲಿ. ತಾನೂ ಮಗಳೂ ಕೂಡಿ.

—ಭಾಗೀರಥಿಯ ಮೈಮೇಲೆ ಸೇರು ಭಂಗಾರವಿತ್ತು. ಇದ್ದದ್ದನ್ನಾದರೂ ಮಗಳಿಗೆ ಕೊಡಬಾರದೇ? ಈ ವೈದೀಕ ಬ್ರಾಹ್ಮಣರ ಹಣೆಯಬರಹವೇ ಇಷ್ಟು. ಕೊಟ್ಟು ಗೊತ್ತೇ ಇಲ್ಲ. ಬರೇ ಜಗ್ಗುವದೊಂದು ಗೊತ್ತು.

—ಎರಡನೆಯ ಸಂಬಂಧ. ಮೂರು ಮಕ್ಕಳಮೇಲೆ ಯಾಕೆ ಕೊಡಬೇಕಾಗಿತ್ತು ಮಗಳನ್ನು?

—ಬೀಗರಿಂದ ಹಣ ಎಳೆದಿದ್ದಾನೆ ಆಚಾರಿ! ಅದಕ್ಕೇ ಈ ಹಾಡು.

—ಛೇ! ಕನ್ಯಾವಿಕ್ರಯಮಾಡುವ ಮನುಷ್ಯನಲ್ಲ ಭೀಮಾಚಾರಿ. ಒಳ್ಳೇ ನಿಷ್ಠಾವಂತ ಬ್ರಾಹ್ಮಣ!

—ನಿಮಗೇನು ಗೊತ್ತು? ಹೀಗೆ ಕಾಣುವವರೇ ಹಾಗಿರುತ್ತಾರೆ.

* * * *

ಇನ್ನೂ ಅನರ್ಥದ ಮಾತನ್ನಾಡಿಕೊಂಡಿತು ಕೇರಿಯ ಜನ.

—ಯಮುನಾ ಗಂಡನ ಕೂಡ ಮಾತೇ ಆಡಲಿಲ್ಲವಂತೆ! ಅವನನ್ನೇ ಚಿವುರಿಕೊಂಡು ಓಡಿಹೋಗಿದ್ದಳಂತೆ!

—ಮತ್ತೇನು ಮಾಡಿಯಾಳು? ಆಕೆಯ ಗಂಡನಿಗೆ ಓಣೆಗೊಂದು ಹೆಣ್ಣು: ಊರಿಗೊಂದು ಹೆಣ್ಣು!

—ಯಮುನಾನ ಗಂಡ ಕುಡುಕನಂತೆ! ಇವಳನ್ನು ದಿನಾ ಬಡಿಯುತ್ತಿದ್ದನಂತೆ!

—ಯಮುನಾ ಹಾಳುಬಾವಿ ಬಿದ್ದಿದ್ದಳಂತೆ. ಮೊಳಕಾಲು ಕೆತ್ತಿ ಹೋಗಿವೆ.

—ಅವಳೇಕೆ ಬಿದ್ದಾಳು? ಅವರೇ ಬಡಿದು ಹಾಕಿದ್ದಾರು!

—ಆಕೆಯ ಗಂಡನಿಗೆ ಕ್ಷಯರೋಗವಂತೆ! ಮಿರಜಿಗೆ ಒಯ್ದಿದ್ದಾರಂತೆ!

* * * *

ಯಾವುದು ನಿಜವೋ ಯಾವುದು ಸುಳ್ಳೋ! ಜನತಾ ಜನಾರ್ದನನ ವಾಣಿ! ಇಷ್ಟೆಲ್ಲ ಮಾತು ಹೇಗೆ ಗೊತ್ತಾಗುವವೋ! ಯಮುನಾನ ಮೇಲೆಯೂ ಸಲ್ಲದ ಮಾತನಾಡಿಕೊಂಡಿತು ಜನ. ಸಮಾಜ ಪುರುಷನಿಗೆ ಸಾವಿರನಾಲಗೆ. ಎಲ್ಲಾ ಹಲ್ಲುಗಳಿಗೂ ಕಚ್ಚುವ ಚಪಲ. ಅದು ಸಾಯುಗೊಡದ ವಿಷದಂಶ!

* * * *

ಯಮುನಾ ಹೊರಕ್ಕೆ ಬರುವದೇ ಇಲ್ಲ. ಅನಂತನೂ ಮೊದಲಿನಂತಿಲ್ಲ. ಅವಳನ್ನು ಕಾಣುವದೇ ಅಪರೂಪವಾಗಿದೆ. ನಮಗೂ ಅವರ ಮನೆಗೆ ಹೋಗಲು ಮನಸ್ಸೇ ಬರುವದಿಲ್ಲ.

ಒಂದು ದಿನ ನಮ್ಮ ತಂದೆ ಭೀಮಾಚಾರ್ಯರನ್ನು ಕಂಡು ಬಂದರು. ಭೀಮಾಚಾರ್ಯರೂ ಜತೆಗೇ ಬಂದರು. 'ಜೀವ ಬೇಸರವಾಗಿದೆ' ಎಂದು ಹೇಳುತ್ತಿದ್ದರು. ಆಚಾರ್ಯರ ಮುಖದಲ್ಲಿ ಮುಂಚಿನ ಮಿಂಚಿಲ್ಲ.

ಆಚಾರ್ಯರು ಈಗ ದಿನಾ ನಮ್ಮ ಮನೆಗೆ ಬರುತ್ತಾರೆ. ಆದರೆ ಮೊದಲಿನ ಗೆಲುವಿಲ್ಲ; ಗಡುಸೂ ಇಲ್ಲ. ನಗೆ ಮಾಯವಾಗಿದೆ. ಮಾತೂ ಅಷ್ಟಕ್ಕಷ್ಟೆ.

ಒಂದು ದಿನ ಹಠಾತ್ತನೆ "ವಿಷ ಹೇಗಿರುತ್ತದೆ ರಾಯರೇ" ಎಂದು ಕೇಳಿದರು, ಆಚಾರ್ಯರು ನಮ್ಮ ತಂದೆಗೆ. "ಹುಚ್ಚನೇನು ನೀನು—ಭೀಮಾಚಾರಿ" ಎಂದರು ನಮ್ಮ ತಂದೆ.

"ಸುಮ್ಮನೆ ಕೇಳಿದೆ....ಹೆ....ಹೆ....ಹೆ...." ಎಂದು ನಕ್ಕರು ಆಚಾರ್ಯರು.

"ಮೂರ್ಖನಂತೆ ಮಾತಾಡಬೇಡ, ಆಚಾರಿ. ಕಷ್ಟ ಬಂದದ್ದು ನಿನಗೊಬ್ಬನಿಗೇ ಏನು? ಎಲ್ಲರಿಗೂ ಬರುತ್ತದೆ. ತಂತಾನೆ ಮಾಯವಾಗುತ್ತದೆ."

"ಹೌದು ನೀವನ್ನುವದು ನಿಜ" ಎಂದು ಎದ್ದರು ಆಚಾರ್ಯರು.

ಮುಂದೆ ನಾಲ್ಕುದಿನ ಆಚಾರ್ಯರು ನಮ್ಮ ಮನೆಯ ಕಡೆಗೆ ಸುಳಿಯಲಿಲ್ಲ.

* * * *

ಒಂದು ಮಧ್ಯರಾತ್ರಿ ಅನಂತನ ಮನೆಯಲ್ಲಿ ಶಂಖವಾದ್ಯ ಕೇಳಿತು. ಓಣಿಯ ಜನ ಎಲ್ಲಾ ಎದ್ದು ಬಾಗಿಲಿಗೆ ಬಂದಿತ್ತು.

ಆಚಾರ್ಯರ ಮನೆಯ ಬಾಗಿಲು ತೆರೆದಿತ್ತು. ಯಮುನಾ ತಲೆ ಕೆದರಿಕೊಂಡು ಬೆದರಿ ನಿಂತಿದ್ದಾಳೆ!

ಆಚಾರ್ಯರು "ಬಾ, ಯಮುನಾ; ಯಾಕ— ಹೆದರಿದಿಯೇನು?" ಎಂದು ಮೆಲುದನಿಯಲ್ಲಿ ಕೇಳುತ್ತಿದ್ದಾರೆ.

"ನಾ ಒಲ್ಲೇಽ ನಾ ಒಲ್ಲೇಽಽ" ಎಂದು ಅಳುತ್ತಿದ್ದಳು ಯಮುನಾ.

"ನಾಯೇನೂ ಮಾಡುವದಿಲ್ಲವ್ವಾ, ಬಾ ಮಗಳೇ" ಎಂದು ಕೈ ಹಿಡಿದು ಕರೆದರು ಆಚಾರ್ಯರು.

"ನೀ ತಂದೆಯಲ್ಲ ಅಪ್ಪಾ, ರಾಕ್ಷಸಾ—ಅಯ್ಯೋ ನಾ ಒಲ್ಲೇಽ" ಎಂದು ಚೀರಿ ಕಟ್ಟೆಹಾರಿ ನಮ್ಮ ಜಗಲಿಗೆ ಬಂದಳು ಯಮುನಾ. ಯಶೋದಾನೂ ಎದ್ದುಬಂದು ಕಟ್ಟೆಯ ಮೇಲೆ ನಿಂತಿದ್ದಳು. ಅಷ್ಟು ದಿನಗಳಿಂದ ಕಾಣಬೇಕೆಂದಿದ್ದ ಗೆಳತಿಯನ್ನು ಇಂದು ಹೀಗೆ ನೋಡಬೇಕಾಯಿತಲ್ಲಾ— ಎಂದು ಯಶೋದಾ ಅವಳನ್ನು ಮುಟ್ಟಲೋ ಬೇಡವೋ ಎನ್ನುವಾಗ ಹತ್ತಿರ ನಿಂತ ನಮ್ಮ ತಾಯನ್ನು ನೋಡಿ ಯಮುನಾ "ಕಕ್ಕಿ, ನಾ ನಿಮ್ಮಲ್ಲೇ ಇರತೇನಿ" ಎಂದು ತೆಕ್ಕೆ ಬಿದ್ದಳು.

ಯಮುನಾ ನಮ್ಮಲ್ಲೇ ಇದ್ದಳು. ಯಾರೊಡನೆಯೂ ಮಾತಿಲ್ಲ; ಕತೆಯಿಲ್ಲ. ಹುಚ್ಚಿಯಂತೆ ಕುಳಿತಲ್ಲೇ ಕೂಡುತ್ತಾಳೆ. ಅವ್ವ ಬಲುಮೆಯಿಂದ ಒಂದು ತುತ್ತು ಅನ್ನ ತಿನ್ನಿಸಬೇಕಾದರೆ ಸಾಕುಬೇಕಾಗುತ್ತದೆ.

ಯಶೋದಾ ಅವಳ ಬಳಿ ಸುಳಿಯುವದಿಲ್ಲ. ಹೆದರಿಕೊಂಡಿದ್ದಾಳೆ

ಮತ್ತೆ ಸಮಾಜ ಪುರುಷನ ಸಾವಿರ ನಾಲಗೆಗೆ ಆಚಾರ್ಯರು ಗುರಿಯಾದರು.

—ಮೂರ್ಖ ಆಚಾರಿ. ಮಗಳನ್ನೇ ಹಿಡಿದುಕೊಳ್ಳಹೋಗಿದ್ದ!

—ಹೆಂಡತಿ ಸತ್ತು ಹತ್ತುವರುಷವಾಯಿತು. ಮತ್ತೇನು ಮಾಡಿಯಾನು ?

—ಊರಲ್ಲಿ ಸೂಳೆಯರಿಲ್ಲವೇನು ? ಇಂಥ ಕೆಲಸಯಾಕೆ ಮಾಡಬೇಕು?

—ಕೆಲಸಕ್ಕೆ ಬರುವ ಕಲ್ಯಾಣಿಯನ್ನೇ ಬಿಟ್ಟವನಲ್ಲ-ಅವ! ಇನ್ನು ಮಗಳನ್ನು ಬಿಟ್ಟಾನೆ ?

—ಛೇ! ಮಗಳನ್ನು ಯಾಕೆ ಹಿಡಿದುಕೊಂಡಾನು ? ನಿಷ್ಠಾವಂತ ಬ್ರಾಹ್ಮಣ!

—ಹೀಗೆಲ್ಲ ಹೇಳಬೇಡರಿ. ಇಂಥವರೇ ಹಾಗಿರುತ್ತಾರೆ!

—ಮತ್ತೇನಾದರೂ ಇರಬೇಕು; ಹೀಗಿರಲಿಕ್ಕಿಲ್ಲ.

—ಮತ್ತೇನಿರುತ್ತದೆ ಮಣ್ಣು! ಕಂಡದ್ದೇ ಇದೆ.

—ಯಮುನಾ ದೇಸಾಯರ ಮನೆ ಸೇರಿ ಹದಿನೈದು ದಿನವಾಯಿತು. ಜಪ್ಪೋ ಅಂದರೂ ತಂದೆಯ ಮನೆ ಒಲ್ಲೆ ಅನ್ನುತ್ತಾಳೆ.

—ದೇಸಾಯರಾದರೂ ಯಾಕೆ ಸೇರಿಸಿಕೊಳ್ಳಬೇಕು ? ಅಪವಾದ ಯಾರಿಗೆ ?

—ಮತ್ತೇನು ಮಾಡಿಯಾರು ? ಮನೆಹೊಕ್ಕರೆ ನೀನೇನು ಮಾಡುತ್ತಿದ್ದಿ ?

—ಎಳೆದು ಹೊರದಬ್ಬುತ್ತಿದ್ದೆ. ಈ ವಿಷಕನ್ಯೆಯನ್ನೇನು ಮನೆಸೇರಿಸುವದು ?

—ನೀಚ ಆಚಾರಿ. ಅವನನ್ನು ಹಿಡಿದುಹಾಕಿಸಬೇಕು.

—ದೇಸಾಯರೇ ಸರಿಪಡಿಸಬೇಕು. ಅವರಿಗೇ ಅದು ಸಾಧ್ಯ.

—ಅವರೇನು ಮಾಡುತ್ತಾರೆ ? ಅವರಿಗೂ ಒಳ್ಳೆಯ ಹೆಸರು ಬರುವದಿಲ್ಲ.

—ಛೀ! ಅವರಿಗಂದರೆ ನಾಲಿಗೆ ಹುಳಿತೀತು!

—ಅವರ ಕಾಲೇ ಕೊಳೆಯುತ್ತದೆ; ನೋಡುತ್ತಿರಿ.

* * * *

ನಾಲ್ಕುದಿನವಾಯಿತು. ಭೀಮಾಚಾರ್ಯರು ಮನೆಗೇ ಬರಲಿಲ್ಲ. ಅನಂತನೂ ನಾನೂ ಓಣಿ ಓಣಿ ಅಲೆದೆವು. ಊರು ಊರು ಸುತ್ತಿದೆವು. ಅವರ ಸುಳಿವೇ ಇಲ್ಲ.

ಒಂದು ದಿನ ಅವರ ಆಕಳು ‘ಅಂಬಾ’ ಎಂದು ಮಧ್ಯಾಹ್ನವೇ ಮನೆಗೆ ಬಂತು. ಅನಂತ ಕಟ್ಟಹೋದರೆ ಕಟ್ಟಿಸಿಕೊಳ್ಳಲಿಲ್ಲ.

ದನಕಾಯುವ ತಿಮ್ಮ ಬಂದು ಹೇಳಿದ: ಆಚಾರ್ಯರು ಉರ್ಲು ಹಾಕಿಕೊಂಡಿದ್ದಾರೆ. ಕಿರುಬನಕಾಡಿನಲ್ಲಿ ಗಿಡಕ್ಕೆ ಜೋತಾಡುತ್ತದೆ ಶವ!

ಓಣಿಯ ನಾಲ್ಕುಜನ ಹೋಗಿ ಚಕ್ಕಡಿಯಲ್ಲಿ ಹೆಣ ಸಾಗಿಸಿಕೊಂಡು ಬಂದರು. ಮೊದಲೇ ಭೀಮಕಾಯ; ಬಾತು ತಿದಿಯಾಗಿತ್ತು ಶವ!

ಆಕಳು ‘ಅಂಬಾ’ ಎಂದು ಕೂಗಿತು.

ಅನಂತ ‘ಅಪ್ಪಾ’ ಎಂದು ಗೋಳಾಡುತ್ತಿದ್ದ.

ಹಾರಿಬಂದು ಯಮುನಾ “ಅಪ್ಪಾ. ನಾನೇ ನಿನ್ನನ್ನು ಕೊಂದೆ. ನಿನ್ನಿಂದ ನಾನು ಸಾಯಲಿಲ್ಲ.” ಎಂದು ಹಾಡಿಕೊಂಡು ಅಳತೊಡಗಿದಳು.

ಅದೇ ಚಕ್ಕಡಿಯಲ್ಲಿ ಶವವನ್ನು ಸ್ಮಶಾನಕ್ಕೆ ಸಾಗಿಸಿದರು. ಅನಂತ ಅಗ್ನಿ ಹಿಡಿದು ಮುಂದೆ ಹೊರಟಿದ್ದ.

* * * *

ಅವ್ವನ ಮುಂದೆ ಯಮುನಾ ಅಂದು ಹೇಳಿದಳಂತೆ: ಭೀಮಾಚಾರ್ಯರು ದಿನಾ ತಮ್ಮ ಕೋಣೆಯಲ್ಲಿ ಚಪಕೊಡಲಿ. ಕುಡಗೋಲು ಮಸೆಯುತ್ತಿದ್ದರಂತೆ! ಅವಳನ್ನು ಕಡಿದುಹಾಕಲು ಬಂದಿದ್ದರಂತೆ.

* * * *

—ಕೊನೆಗೆ ಭೀಮಾಚಾರಿ ಆತ್ಮಹತ್ಯ ಮಾಡಿಕೊಳ್ಳಬೇಕಾಯಿತು.

—ಸ್ತ್ರೀಹತ್ಯಕ್ಕಿಂತ ಅದೇ ಮೇಲು!

—ಮನೆತನದ ಮರ್ಯಾದೆ ಉಳಿಸಿದ ಭೀಮಾಚಾರಿ.

—ಏನು ಉಳಿಸುತ್ತಾನೆ? ತಾನೇ ಹೋದ. ಅದು ಮೊದಲೇ ಹೋಗಿತ್ತು.

ಇನ್ನೂ ನೂರು ಮಾತು ಆಡಿಕೊಂಡಿತು ಜನ.

ಅನಂತ ಕರ್ಮ ಮಾಡಲು ಸೀತೀಮನಿಗೆ ಹೋಗಿದ್ದ. ತಿರುಗಿ ಬಂದೇ .

* * * *

ನಮ್ಮ ತಂದೆ ಯಮುನಾನನ್ನು ಬೆಳಗಾವಿಗೆ—ಅವರ ಅತ್ತೆಮನೆಗೆ ಕಳಿಸಿಬಂದರು. ಅವರು ಕರೆದುಕೊಂಡರಂತೆ!

# ಭಜನೆಯ ಭೂತ

ಕಳೆದ ಕ್ರಿಸ್ಮಸ್ ರಜೆಯಲ್ಲಿ ಗೆಳೆಯ ಗಿರೀಶನ ಮದುವೆಯ ನಿಮಿತ್ತದಿಂದ ಕಾರವಾರದಲ್ಲಿ ಕೆಲವು ಗೆಳೆಯರು ಸೇರಿದ್ದೆವು. ಗಿರೀಶನಿಗೆ ಗೊತ್ತಾದ ವಧು ನಮ್ಮೊಡನೆಯೇ ಕಾಲೇಜಿನಲ್ಲಿ ಓದುತ್ತಿದ್ದ ಶಾಲಿನಿ. ಶಾಲಿನಿಯ ತಂದೆ ಕಾರವಾರದಲ್ಲಿ ಅಧಿಕಾರಿಗಳಾಗಿದ್ದರು. ಅಂತೆಯೇ ಪಶ್ಚಿಮ ಕರಾವಳಿಯ ಸುಂದರ ದೃಶ್ಯ ನೋಡಲು ನಮಗೆ ಈ ಮದುವೆ ಕಾರಣವಾಯಿತು.

ಒಂದು ಸಂಜೆ ವಿಹಾರಕ್ಕೆಂದು ನಾವು ಕಡಲತಡಿಯ ಮಳಲ ರಾಶಿಯಲ್ಲಿ ಕುಳಿತಿದ್ದೆವು. ಹೊತ್ತು ಕಳೆದು ಊಟವಾದುದರಿಂದ ಸಂಜೆಯ ಯಾವ ಚಿಂತೆಯೂ ನಮಗಿದ್ದಿಲ್ಲ. ಮದುವೆಯ ಯಾವುದೋ ವಿಧಿ-ನಿಯಮಗಳಲ್ಲಿ ತೊಡಕಿದ ಗಿರೀಶ-ಶಾಲಿನಿಯರು ನಮ್ಮೊಂದಿಗೆ ಬರುವಂತೆ ಇದ್ದಿಲ್ಲ.

ಹುಣ್ಣಿವೆ ಕಳೆದಿತ್ತು. ಚಂದ್ರನಿನ್ನೂ ಮೇಲೆ ಬಂದಿದ್ದಿಲ್ಲ. ನಾವು ಪಡುವಕಡಲ ಕಪ್ಪು ಜಲರಾಶಿಯಲ್ಲಿ ತೆರೆಯ ತುರಾಯಿಯಾಗಿ ತೊನೆಯುತ್ತಿರುವ ನೊರೆಯ ಕುಣಿತವನ್ನು ಕಾಣುತ್ತ ಚಂದ್ರನನ್ನು ಅದರಲ್ಲಿದ್ದಿ ನೋಡುವ ಎಣಿಕೆಯಲ್ಲಿದ್ದೆವು.

ಹತ್ತು ಕಡೆಯ ಜನ ಒಂದೆಡೆಗೆ ಸೇರಿದಾಗ ನೂರು ತರದ ಮಾತುಗಳು ಒಂದಕ್ಕೊಂದು ಕೊಂಡಿಯಾಗಿ ಹಿಡಿದು ಮುಗಿಯದ ಮಾಲೆಯಾಗಿ ಹಬ್ಬುವದಿಲ್ಲವೇ ? ಹೀಗೆ ಕಾಲಿಲ್ಲದ ಕಥನ ನಡೆದಿತ್ತು.

ಒಬ್ಬೊಬ್ಬರು ಬಹುಶಃ ತಾವು ಕಂಡ ಮದುವೆಯ ರಸಪ್ರಸಂಗಗಳನ್ನೇ ಹೇಳುತ್ತಿದ್ದರು. ಕಳೆದ ವರುಷ ಧಾರವಾಡದಲ್ಲಿ ನಡೆದ ರಾಮಚಂದ್ರನ ಮದುವೆಯ ಮಾತು ಬಂತು. ನಮ್ಮಲ್ಲಿ ಹಲವರಿಗೆ ಆ ಮದುವೆಗೆ ಹೋಗಲಾಗಿದ್ದಿಲ್ಲ. ಮಾರ್ಚಿತಿಂಗಳಲ್ಲಿ ಮದುವೆಯೆಂದರೆ ದೂರದಲ್ಲಿ ಕೆಲಸಕ್ಕೆ ಸೇರಿದ ಎಲ್ಲರಿಗೆ ಬರಲು ಹೇಗೆ ಸಾಧ್ಯ ? ಆದರೆ ರಾಮಚಂದ್ರ ಕಾಲೇಜಿನಲ್ಲಿ

ನ್ನಾಗಲೇ ಕವಿಯಾಗಿ, ಚಿತ್ರಕಾರನಾಗಿ, ಒಳ್ಳೆಯ ಭಾಷಣಕಾರನಾಗಿ ಹೆಸರಾಗಿದ್ದ. ಅವನಿಗೆ ಎಲ್ಲ ದೆಸೆಯ ಜನರ ಸ್ನೇಹ. ಅಂತೆಯೇ ನಾವು ಕೆಲವರು ಹೋಗದಿದ್ದರೂ ತಕ್ಕಮಟ್ಟಿಗೆ ಜನ ಸೇರಿತ್ತಂತೆ !

ಅವನ ಮದುವೆಯಲ್ಲಿ ಮುಂದಾಳಾಗಿದ್ದ ನಾನಿ ಅಲ್ಲಿದ್ದ. ಅಭಯನೂ ಬಂದಿದ್ದ. ನಾನಿಯ ಆಸನ, ಪ್ರಾಣಾಯಾಮಗಳ ಗುರು—ದೀಕ್ಷಿತರದು ಕಾರವಾರದಲ್ಲಿಯೇ ಆಶ್ರಮವಿತ್ತು. ಅವರೂ ರಾಮಚಂದ್ರನ ಮದುವೆಯ ಸಮಯ ಧಾರವಾಡದಲ್ಲಿದ್ದರಂತೆ

ಆ ಮದುವೆಯ ಮಾತನ್ನು ಕೇಳಲು, ಹೋಗಲಾಗದ ನಮಗೆ ತುಂಬ ಕುತೂಹಲವಿತ್ತು. ನಾನಿ ಹೇಳಲು ಮುಂದಾದ. ನಾವು ಕಿವಿಗೊಟ್ಟು ಕುಳಿತೆವು. ಒಂದು ಕಿವಿ ಕಡಲ ಜೋಗುಳಕ್ಕೆ ಮೀಸಲಾಗಿತ್ತು. ಇನ್ನೊಂದು ಕಿವಿಯಿಂದಲಾದರೂ ಸುದ್ದಿ ಕೇಳಬೇಕಾದರೆ 'ಕಿವಿಗೊಟ್ಟೇ' ಕೇಳಬೇಕಾಗುತ್ತಿತ್ತು.

ನಾನಿಯ ಸೋಗು ಬಹಳ. ಅವನು ಶಾಂತಿನಿಕೇತನದ ವಿಶ್ವಭಾರತಿಯಲ್ಲಿ ಅನೇಕ ಮಾತುಗಾರರ ಅಭಿನಯ ನೋಡಿ ತನ್ನದೇ ಆದೊಂದು ರೀತಿಯನ್ನಳವಡಿಸಿಕೊಂಡಿದ್ದಾನೆ. ಅವನು ಮಾತಿನಿಂದ ಮಾತಿಗೆ ಹಾರುವಾಗ ಅವನ ಜೊತೆಗಿದ್ದು ಬಂದ ಶೇಷ—ಇದು ಗುರುದೇವನ ರೀತಿ, ಇದು ಬಸುಗಳ ನಡಿಗೆ, ಈಗ ನೋಡು ದೀನಬಂಧು—ಎಂದು ಹೇಳುತ್ತಾನೆ. ನಾವು ಗಿಂಡಿಯಲ್ಲಿ ತಂದ ಗಂಗೆಯ ನೀರಿನಿಂದಲೇ ತೃಪ್ತರಾದ ಭಾವುಕರಂತೆ ಇವನಲ್ಲೇ ಅವರನ್ನೆಲ್ಲ ಕಾಣುತ್ತೇವೆ

ನಾನಿ ಕೈ ಕೊಂಕಿಸಿ ಗೋಣು ಬಳುಕಿಸಿ ಕಣ್ಣು ಅರ್ಧ ನಿಮೀಲಿತಗೊಳಿಸಿ ಮಾತಿಗೆ ತೊಡಗಿದ.

—“ಹೀಗೇ ಅಂದು ಮದುವೆಯ ಮರುದಿನ. ಶ್ರೀರಾಮಚಂದ್ರ ತನ್ನ ಭೂಮಿಜೆಯ ಸಮೇತ ನಮ್ಮನ್ನಿಳಿಸಿದ ಬಿಡಾರಕ್ಕೆ ನಡೆದುಬಂದ. ಅವನ ಹಿಂದೆಯೇ ತಿಂಡಿ-ತೀರ್ಥದ ಪರಿವಾರವೂ ಬಂತು. ನಾವದನ್ನು ಇಳಿಸಗೊಡದೆ ಹರಿದು ಹಂಚಿಕೊಂಡು ಧ್ವಂಸಮಾಡಿದೆವು.

“ಅಭಯನಿಗೆ ಅಂದು ಸ್ವಲ್ಪ ಜ್ವರ ಬಂದಿತ್ತು. ಗೆಳೆಯನ ಮದುವೆಗೆ ಬಹುದೂರದಿಂದ ಬಂದವನೆಂದರೆ ಅಭಯನೇ. ಮದುವೆಯ ಗಲಾಟೆಯಲ್ಲಿ ನಮಗಾರಿಗೂ ಅವನನ್ನು ನೋಡಿಕೊಳ್ಳಲು ಬಿಡುವಾಗಿದ್ದಿಲ್ಲ.

"ರಾಮನಿಗೆ ವೈದ್ಯಕದಲ್ಲಿಯೂ 'ಗತಿ'ಯಿದೆಯೆಂದು ಗತಿಯಿಲ್ಲದವರು ತಿಳಿದುಕೊಂಡಿದ್ದಾರೆ. ಅಂದು ಅಭಯನ ಜ್ವರಕ್ಕೆ ಅವನೇ ಗತಿಯಾದ! ಒಂದು ಯಾವುದೋ ಪುಡಿ ತಿನ್ನಿಸಿ ಒಂದು ಕಪ್ಪು ಹಾಲು ಕುಡಿಯೆಂದ. ಅಭಯನಿಗೆ ಹಾಲೆಂದರೆ ಹಾಲಾಹಲ 'ಒಂದು ಕಪ್ಪು ಹಾಲಿನಲ್ಲಿ ಆಗುವಷ್ಟು ಚಹಾ ಕೊಡು' ಎಂದ ರಾಮು ಅವನನ್ನು ಕಾಫಿಗೆ ಒಪ್ಪಿಸಿದ.

"ಬರೆಯುವ ರಾಮು ಸಾಲು ಸಾಲನ್ನು ಓದಿ ಅಭಿಪ್ರಾಯಕ್ಕೆ ಜತೆಯವರ ಮುಖ ನೋಡುತ್ತಾನೆ. ಚಿತ್ರದ ಗೆರೆ ಎಳೆದು ಹತ್ತಿರವಿದ್ದವರನ್ನು ಆತುರ ದೃಷ್ಟಿಯಿಂದ ಪ್ರಶ್ನಿಸುತ್ತಾನೆ ಭಾಷಣಗಳಲ್ಲಂತೂ ಚಪ್ಪಾಳೆಗೆ, ನಗೆಗೆ ಇವನೇ ಸಮಯ ಒದಗಿಸಿ ಆಗ ಮುಖ ವರೆಸಿಕೊಳ್ಳುತ್ತಾನೆ. ಶ್ರೋತೃಗಳು ಅವನ ಮಾತಿಗೆ ನಕ್ಕು ಕೈತಟ್ಟದಿದ್ದರೂ ಅವನ ದಣಿವಿನ ನಟನೆಗಾದರೂ ಕೈ ತಟ್ಟಿ ಕೇಕೆ ಹಾಕುತ್ತಾರೆ. ಅಂದು ಔಷಧಿ ಕೊಟ್ಟವನೇ 'ಹೇಗನಿಸುತ್ತದೆ?' ಎಂದ. ಅಭಯ 'ನಿನ್ನ ಔಷಧದಿಂದ ತಕ್ಷಣವೇನೂ ಭಯ ಕಾಣಲಿಲ್ಲ' ಎಂದ. ಅಭಯನಿಗೆ ಸದಾ ಇನ್ನೊಬ್ಬರೊಡನೆ ಛಲುವ ಮಾತೇ. 'ಜ್ವರದ ಭಯ?' ಎಂದು ನಾನು ಕೇಳಿದೆ. 'ಅದಕ್ಕೆ ನಾನು ಹೆದರಲಿಲ್ಲ. ಈ ಔಷಧಕ್ಕೇ ಹೆದರಿದ್ದು'- ಎಂದ ಅಭಯ."

ಅಲ್ಲಿಯೇ ಕುಳಿತ ಅಭಯನನ್ನು ನಾನು ನೋಡಿ 'ಹೌದೇ' ಎಂದು ಕೇಳಿದೆ. "ನಾನಿಗೆ ಸತ್ಯದ ನಟನೆ ಸಾಧಿಸಿದೆ. ಅವನ ಮಾತಿನಲ್ಲಿ ಸತ್ಯವಿಲ್ಲದಿಲ್ಲ ಸುಳ್ಳು ಕಾಣದಂತೆ ಅವನ ವೇಷವಿದೆ." ಎಂದ. 'ನೀ ಸುಮ್ಮನಿರು' ಎಂದು ನಾನಿ ತಲೆಯ ಕೂದಲು ನೇವರಿಸಿ, ತನ್ನ ಜುಬ್ಬ ಸರಿಪಡಿಸಿಕೊಂಡು ಮುಂದುವರಿದ:

—"ಕೇಸ ಇದ್ದ ಹಾಗೆ · ರಾಮು. ನಿನ್ನ ಮದ್ದು ಇನ್ನು ಗೆಳೆಯರಿಗೆ ನಾಟುವಂತಿಲ್ಲ'ವೆಂದ. ರಾಮನ-ಮುದ್ದು-ಮಡದಿ ಸುನಂದಾ ಅಲ್ಲೇ ಇದ್ದಳು. ಅವಳಿಗೆ ಗೆಳೆಯರ ಈ ವಿನೋದ ತಟ್ಟಿತೇನೋ! ಅವಳ ಮುಖ ಕೆಂಪೇ ತುಟಿಯಲ್ಲೇ ನಗೆಚಿಮ್ಮಿಸಿದಳು."

ಅಭಯ, 'ರಾಮುನ ಮದುವೆಯಲ್ಲಿ ಜಡ್ಡು ಬಿದ್ದದ್ದು ನನ್ನದೇ ತಪ್ಪು. ಈ ಪ್ರೇಕರಿಗೆಲ್ಲ ನನ್ನನ್ನಲ್ಲಿ ನೋಡಿಕೊಂಡಾರು! ಅವರೆಲ್ಲ ರಾಮು-ಸುನಂದಾ ಇವರ ಬಾಳಿವಾಗಿ ಸುತ್ತುತ್ತಿದ್ದರು'—ಎಂದು ವದರಿ ಮಾತಾಡಿದ.

ಅಭಯ ಮಾತನಾಡಿದರೆ ನಾಸಿಗೆ ತಲೆಶೂಲೆ. ಮತ್ತೆ ಅವನನ್ನು ತನ್ನ ಆನೆಗಣ್ಣುಗಳಿಂದ ನೋಡಿ—'ಮುಂದೆ ಕೇಳಿರಿ' ಎಂದು ದನಿ ಸರಿಪಡಿಸಿಕೊಂಡ.

—"ಅಂದು ಪಂಡಿತ ತಾರಾನಾಥರಾಯರು ಬಂದಿದ್ದರು. (ಧಾರವಾಡಕ್ಕೆ) ಕಡಸಾ ಮೈದಾನಿನಲ್ಲಿ ಅವರ ಭಾಷಣವಿತ್ತು. ನಾವೆಲ್ಲ ಹೊರಟುನಿಂತೆವು. ರಾಮನ ಔಷಧ ಸೇವಿಸಿದ ಅಭಯ ನಮಗೆಲ್ಲರಿಗೆ ಹೋಗಲು ಒಪ್ಪಿಗೆ ಇತ್ತ.

"ಮದುವೆಯ ಬಿಡಾರವೆಂದು ಒಂದು ಪೆಟ್ರೋಮ್ಯಾಕ್ಸ ಅಲ್ಲಿ ತೂಗಿಸಲಾಗಿತ್ತು. ಕೇಶ ಅಭಯನಿಗೆ ಕಂಬಳಿ ಹೊದಿಸಿ, ಮಲಗಿಸಿ, ಬಾಗಿಲು ಹಾಕಿ, ಕೀಲಿ ಜಡಿದು 'ನಡೆಯಿರಿ' ಎಂದ.

"ಅಭಯನನ್ನು ಸೆರೆಗೊಳಿಸಿ ನಾವು ದೇಸಾಯಿ ಓಣಿಯಿಂದ ಕಡಸಾ ಬಯಲಿಗೆ ಕ್ವಿಕ್‌ಮಾರ್ಚ ಮಾಡಿದೆವು"

* * * *

"ಮುಂದಿನ ಕಥೆ ನಿನಗೆ ಸಂಬಂಧಪಟ್ಟಿದ್ದಲ್ಲ. ಅದು ನನ್ನ ಕಥೆ; ನಾನೇ ಹೇಳುತ್ತೇನೆಂ"ದು ಅಭಯ ನಾಸಿಯನ್ನು ಹಿಂದೆಳೆದು ಮುಂದೆ ಸರಿದ. ನಾಸಿ ತನ್ನವೇ ಆದ ಶೈಲಿಯಿಂದ ಹಿಂದೆ ಸರಿದ.

—"ಇವರೆಲ್ಲ ಹೊರಟುಹೋದರು" ಅಭಯ ಆರಂಭಿಸಿದ. "ರಾಮ ಕೊಟ್ಟ ಔಷಧದ ಪ್ರಭಾವದ ಭ್ರಮೆಯಲ್ಲಿ ನಾನು ಹಾಸಿಗೆಗೆ ಹತ್ತಿಕೊಂಡಿದ್ದೆ.

"ಆ ಮನೆ ಬಹಳ ಪುರಾತನವಾದದ್ದು. ಅದರ ಒಂದೊಂದು ಕಂಬಗಳೂ, ತೊಲೆ-ಜಂತೆಗಳೂ ಅದರ ಹಳಮೆಯನ್ನು ಸಾರುತ್ತಿವೆ. ನನ್ನ ಜ್ವರದ ತಾಪದಲ್ಲಿ ಜತೆಗೆ ಯಾರೂ ಇಲ್ಲದೆ ನಾನು ಕೇಳಿದ ಆ ಮನೆಯ ಗತವೈಭವವನ್ನು ನೆನಸಿಕೊಳ್ಳುತ್ತಿದ್ದೆ.

"ಅದು ಒಬ್ಬ ದೊಡ್ಡ ಶ್ರೀಮಂತನ ಮನೆ. ತಲೆ-ತಲಾಂತರದಿಂದ ಲಕ್ಷ್ಮಿಯನ್ನು ಸೆರೆಗೊಳಿಸಿದ ಮನೆ. ಅಂದು ನಾನೊಬ್ಬ ಸೆರೆಯಾಳಾಗಿದ್ದೆ.

"ನಾನು ಮಲಗಿದ ಪಡಸಾಲೆಯಷ್ಟೆ ದೊಡ್ಡ ಅಟ್ಟವಿದೆ ಅದಕ್ಕೆ. ಅಲ್ಲಿ ಎದುರು-ಬದರು ಗೋಡೆಗಳಿಗೆ ಗೋಡೆಯ ಉದ್ದದ ನಿಲುಗನ್ನಡಿಗಳಿವೆ. ಮಧ್ಯ ಒಬ್ಬ ನಿಂತರೆ, ಛಾಯೆ ಹಲವಾಗಿ ಪ್ರತಿಬಿಂಬಿಸಿ, ರಾಸಕ್ರೀಡೆಯ ಕೃಷ್ಣನಂತೆ ಒಂದೇ ಆಕಾರದ ಹಲವರನ್ನು ಅದರಲ್ಲಿ ಕಾಣಬಹುದಾಗಿದೆ. ನಾನು

ಮೊದಲೇ ಆ ಸ್ಥಳವನ್ನು ನೋಡಿದ್ದೆ. ಅದೇ ಸ್ಥಳದಲ್ಲಿ ಆ ಮನೆಯ ಯಜಮಾನ ಉರುಳು ಹಾಕಿಕೊಂಡು ಸತ್ತಿದ್ದನಂತೆ!

" ಈ ನೆನಪಿನ ತೀವ್ರತೆಯೋ ಜ್ವರದ ಏರಿಕೆಯೋ ಕಾಣೆ. ನನಗೆ ಬಹಳ ಸಂಕಟವಾಗತೊಡಗಿತ್ತು. ಚಳಿಯೂ ಆನಿಸಿತ್ತು. ಕಂಬಳಿಯ ಮುಸುಕು ಹಾಕಿಕೊಂಡು ಕಾಲು ಗೂಡುಗಟ್ಟಿಕೊಂಡು ಮುದ್ದೆಯಾಗಿ ಮಲಗಿದ್ದೆ.

" ಜ್ವರದ ತಾಪಕ್ಕೆ ಕಣ್ಣು ಮುಚ್ಚಿಕೊಳ್ಳುತ್ತಿದ್ದವು. ಅರ್ಧ ನಿದ್ರೆಯೇ ಹಿಡಿದಂತಾಗಿತ್ತು.

" ನಾನು ಹೇಳಿದ ಆ ಅಟ್ಟದಿಂದ ಯಾರೋ ಎಡೆಯಾಡುವ ಕಾಲ ಸಪ್ಪಳ ಕೇಳಿದಂತಾಯಿತು. ಒಂದು ಕ್ಷಣ ನನಗೆ ಗಾಬರಿಯಾಯಿತು. ನನ್ನ ಹೆಸರನ್ನು ನೆನಸಿಕೊಂಡು ಧೈರ್ಯ ತಾಳಿದೆ. ಆದರೆ ಕಾಲಸಪ್ಪಳ ಎಡಬಿಡದೆ ಕೇಳುತ್ತಲೇ ಇತ್ತು.

" ಆ ಅಟ್ಟ ಮಾಲಿಕನ ಆತ್ಮಹತ್ಯೆಯ ಸ್ಥಳವಷ್ಟೆ. ವಾಸನಾಭೂತವಾಗಿ ಅವನು ಈ ಮನೆಯಲ್ಲಿಯೇ ವಾಸವಾಗಿರಬಾರದೇಕೆ? ಅವನ ಸಾವನ್ನು ನೆನಸಿ ನೆರೆಮನೆಯವರೂ ಹೆದರಿಕೊಂಡುದನ್ನು ನಾನು ಕೇಳಿದ್ದೆ. ನಾನು ಮಲಗಿದ ಪಡಸಾಲೆಯಲ್ಲಿಯೇ ಅವನ ಭಾವಚಿತ್ರದ ಹಿಗ್ಗಿಸಿದ ಪ್ರತಿ ತೂಗ ಹಾಕಿದ್ದನ್ನು ನಾನು ನೋಡಿದ್ದೆ. ಈಗ ಕಣ್ಣುಮುಚ್ಚಿದ್ದರೂ ಮುಸುಕು ಹಾಕಿಕೊಂಡಿದ್ದರೂ ಅಲ್ಲೇ-ಎದುರುಗೋಡೆಯ ಮೇಲಿದ್ದ ಆ ಭಾವಚಿತ್ರ ಭಯಂಕರವಾಗಿ ನನಗೆ ಕಾಣುತ್ತಲಿದೆ. 'ಇಂಥ ಜನಕ್ಕೆ ಇಂಥ ಸಾವೇ ಗತಿ' ಯೆಂದುಕೊಂಡೆ ................ಮರುಕ್ಷಣ—ಇಂಥವರು ಇದ್ದಾಗಲೂ ಜನರನ್ನು ಹೆದರಿಸಿಕೊಂಡು, ಸತ್ತ ಮೇಲೂ ಭೂತವಾಗಿ ಕಾಡುತ್ತಾರಲ್ಲಾ—ಎಂದುಕೊಂಡೆ.

" ಆತ್ಮಹತ್ಯವೆಂದರೆ ಇಚ್ಛಾಮರಣವೇನಲ್ಲವಲ್ಲ! ಸಾಯುವ ಇಚ್ಛೆ ಯಾರಿಗಿರುತ್ತದೆ? ಆದರೆ ಅದು ಯಾರನ್ನು ಬಿಡುತ್ತದೆ?"

" ಇಲ್ಲದ ಪುರಾಣ ಹೇಳಬೇಡ. ನಿನ್ನ ಕಥೆ ಹೇಳು"—ಎಂದು ನಾನು ಅಭಯನನ್ನು ಎಚ್ಚರಿಸಿದೆ.

ಚಂದ್ರ ಮೇಲೆ ಬಂದಿದ್ದಾನೆ. ತೆರೆಗಳು ಉಬ್ಬರಿಸಿ ಕುಣಿಯುತ್ತಿವೆ. ಬೆಳ್ಳಿಯನ್ನೇ ಹೊತ್ತು ತಂದಂತೆ ನೀರ-ಬುರುಗ ದಂಡೆಗೆ ಅಪ್ಪಳಿಸಿ ಮತ್ತೆ ನೀರಾಗಿ ಮಡಲಿಗೆ ಧಾವಿಸಿ ಹೊಯ್ಯುತ್ತಿದೆ.

ಒಂದು ಕ್ಷಣ ಸುಮ್ಮನೆ ಕುಳಿತ ಅಭಯ ಮತ್ತೆ ಹೇಳತೊಡಗಿದ—

—"ಆತ್ಮಹತ್ಯೆ ಮಾಡಿಕೊಂಡವನ ಒಂದು ಕ್ಷಣ ಇಚ್ಛಾಮರಣಿಯೋ! ಆದರೆ ಸಾವು ಅವನಿಗೆ ದುರ್ನಿವಾರ್ಯವೆನಿಸಿ ಇಹದ ಆಸೆ ತೊರೆಯುವಾಗ ತೊಳಲಾಡುತ್ತಾನೆ."

"ಮತ್ತೆ ಪುರಾಣ!" ನಾನಿಯೆಂದ. ನಮಗೂ ಮುಂದಿನ ಘಟನೆ ಕೇಳುವಂತಾಗಿತ್ತು. "ಮುಂದೇನಾಯಿತು—ಹೇಳು" ಎಂದು ನಾನು ಆತುರಪಟ್ಟೆ.

"ಅದನ್ನೇ ಹೇಳುತ್ತೇನೆ" ಎಂದು ಅಭಯ ಮುಂದುವರಿದ—

—"ಮೇಲಟ್ಟದಲ್ಲಿ ನೀರು ಸುರುವಿದ ಸದ್ದು! ಕೆಮ್ಮಿ ಕೇಕರಿಸಿದ ಸದ್ದು! ನನಗೆ ಸಂಶಯವೇ ಉಳಿಯಲಿಲ್ಲ. ಮನೆಯ ಮಾಲಕನೇ ಅವತರಿಸಿದ್ದಾನೆಂದು ಖಾತ್ರಿಯಾಯಿತು.

"ನಾನು ಚಿಕ್ಕಂದಿನಿಂದ ಸ್ವಲ್ಪ ಹಟವಾದಿ. ಹೇವಕ್ಕೆಂದು ಮೇಲಾಟ ಹೂಡಿ ಒಂದು ಅಮಾವಾಸ್ಯೆಯ ಮಧ್ಯರಾತ್ರಿ ಸ್ಮಶಾನಕಟ್ಟೆಗೂ ಹೋಗಿ ಬಂದವ. ಅಂದಿನಿಂದಲೇ ನನಗೆ 'ಅಭಯ'ನೆಂದು ನಾಮಕರಣವಾಯಿತು."

"ಹೌದು; ಮಂದಿಯನ್ನು ಹೆದರಿಸುವವರೆಲ್ಲ ಅಭಯರೇ" ಎಂದ ನಾನಿ. ಅಭಯ ಅತ್ತ ಲಕ್ಷ್ಯಕೊಡದೆ ಹೇಳತೊಡಗಿದ.

—"ಅಂದಿಲ್ಲದ ಭಯ ಇಂದು—ಅಂದರೆ ಆ ರಾತ್ರಿ—ನನ್ನನ್ನು ತಡವಿದಂತಾಯಿತು. ಮೈಯಲ್ಲಿ ಜ್ವರ ಬೇರೆ.

"ಒಮ್ಮೊಮ್ಮೆ ಜ್ವರವೇ ಭೂತವಾಗಿ ಹೀಗೆ ಅನಿಸುತ್ತಿರಬಹುದೇ— ಎಂದು ಶಂಕೆದೋರಿ ಅದನ್ನು ನಿವಾರಿಸಲೆಂದು ಧೈರ್ಯವಾಗಿ ಮುಸುಕು ತೆರೆದು ಅಟ್ಟದ ಕಡೆಗೆ ನೋಡಿದೆ. ಒಂದು ದೀಪ ಸರಿದಾಡುತ್ತಿದ್ದಂತೆ ಕಂಡು ಬಂತು. ನಾ ಮಲಗಿದ ಪಡಸಾಲೆಯಲ್ಲಿ ಪೆಟ್ರೋಮ್ಯಾಕ್ಸಿನ ಪ್ರಖರ ದೀಪದಲ್ಲಿ ಮಾಲಕನ ಭಯಂಕರ ಭಾವಚಿತ್ರ ನನ್ನನ್ನು ಅಣಗಿಸಿದಂತಾಯಿತು. ಅಟ್ಟದ ಮೇಲೆ ನಿಶ್ಚಯವಾಗಿ ವಾಸನಾಭೂತವಿದೆಯೆಂದು ಖಾತ್ರಿಯಾಯಿತು ನನಗೆ.

"ನನ್ನ ಇಷ್ಟು ದಿನದ ಹಟಕ್ಕೆ ಇಂದು ಫಲ ದೊರೆಯುತ್ತದಲ್ಲಾ— ಎಂದು ಭಯಮಿಶ್ರಿತ ಆನಂದ. ಅಂತೂ ಒಮ್ಮೆ ವಾಸನಾಭೂತವನ್ನು ಎದುರುಗೊಳ್ಳುವ ಯೋಗ ಇಂದೊದಗಿಬಂದಿದೆಯೆಂದು ಧೈರ್ಯ ತಾಳ ಲೆತ್ನಿಸಿದೆ. ಎದ್ದು ಮೇಲೆ ಹೋಗಿ ಭೂತದ ಕೈ ಕುಲುಕಬೇಕು—ಎಂದೂ ಯೋಚಿಸಿದೆ.

"ಆದರೆ ಏಳಲಾರೆ. ಮೈಯಲ್ಲಿ ಜ್ವರ ಕುದಿಯುತ್ತಿದೆ. ಶಕ್ತಿ ಉಡುಗಿದೆ. ಸಾವರಿಸಿ ಎದ್ದು ಕುಳಿತೆ. ಮೇಲೆ 'ರಘುಪತಿ ರಾಘವ ರಾಜಾರಾಮ, ಪತೀತ ಪಾವನ ಸೀತಾರಾಮ' ಎಂದು ಭಜನೆ ಸುರುವಾಯಿತು !

"ಈ 'ಭೂತ ಭಜನೆ'ಯಿಂದ ಮತ್ತೆ ವಿಪರೀತವಾದೆ. ಭೂತವನ್ನು ಭೂತ ದಂತೆಯೇ ಎದುರು ಗೊಳ್ಳುವ ಚಪಲ ನನ್ನದು ಆದರೆ ಅದರ ಚಪಲಕ್ಕೇನ್ನೆ-ಗಳಿಂದ ನಾನು ಮೋಸ ಹೋದರೇನು ಗತಿ !—ಎಂದು ಹೆದರಿಕೆಯಾ ಯಿತು."

"ರಾಮಭಜನೆಯಿಂದ ನಿನಗೆ ಧೈರ್ಯ ಬರಲಿಲ್ಲವೇ ?" ಎಂದು ಬೆದರಿದ ದೇಸಾಯಿ ಬಿಸುಸುಯ್ದ.

—"ನಾನು ಹೆದರಿದ್ದು ಆ ರಾಮಭಜನೆಗೇ ನಮ್ಮ ನನ್ನ, ಭೂತ ವೆಂದರೆ ಅದರ ಬಗ್ಗೆ ಒಂದು ಮುಸಕು ಕಲ್ಪನೆ ಮಾಡಿಕೊಂಡಿರುತ್ತದೆ. ಅದು-ಅದೇ ತನ್ನ ಭೂತಸ್ವರೂಪದಲ್ಲಿ ಎದುರುಗೊಂಡರೆ ನಮ್ಮ ಕಲ್ಪನೆಯು ವಾಸ್ತವವೆನಿಸಿ ಒಂದು ಬಗೆಯ ಅಪೇಕ್ಷಿತ 'ಸಮಾಧಾನ'ವಿದ್ದೀತು. ಆದರೆ ನಮ್ಮ ಕಲ್ಪನೆಗೆ ವಿರುದ್ಧವಾದ ಒಂದು ವಿಕಲ್ಪದ ಆಟದಿಂದಲೇ ನಾವು ಬೆದರುವದು. ಅದೇ ಭೂತದ ವೈಶಿಷ್ಟ್ಯ.

"ಇದ್ದುದಿದ್ದಂತೆ ಇದ್ದರೆ ಯಾವ ಹೆದರಿಕೆ ? ಇದ್ದುದು ಇಲ್ಲವಂತೆ. ಇಲ್ಲವೆ ಇಲ್ಲದ್ದು ಇದ್ದಂತೆ ಒಮ್ಮೆಲೆ ತಿರುವು-ಮುರುವಾದರೆ ಆಶ್ಚರ್ಯ ವಾಗುವದಿಲ್ಲವೇ ? ಆಶ್ಚರ್ಯದ ಅತಿರೇಕವೇ ಭಯ, ಅದೇ ಭೂತ !"

"ಥೂ—ಭೂತವಿಜ್ಞಾನಿ ! ಪುರಾಣ ಬೇಡ; ಕಥೆ ಹೇಳಯ್ಯಾ" ನಾನಿ ಬೇಜಾರಪಟ್ಟುಕೊಂಡ.

"ಸುಮ್ಮನಿರೋ ಮಹಾರಾಯಾ, ಪುರಾಣವಿಲ್ಲದೆ ಭಯ ಅಡಗುವ ದಿಲ್ಲ. ಪುರಾಣವೆಂದು ತಿಳಿಯದಿದ್ದರೆ ನರಸಿಂಹಾವತಾರವನ್ನು ಭೂತವೆಂದು

ತಿಳಿಸು ಶ್ರೋತೃವೃಂದ ಓಡಿಹೋಗುವರು. ನಮ್ಮ ಪುರಾಣಿಕ ನರಸಿಂಹಾಚಾರ್ಯರು ಕಂಬಕ್ಕೆ ಕುಳಿತು ಪ್ರಹ್ಲಾದ ಚರಿತ್ರೆ ಹೇಳುತ್ತಿದ್ದರೆ ಅವರ ಬಿಳಿಯ ಗಡ್ಡ, ಬೆಳಸಿದ ತಲೆ, ಹಣೆಯ ಅಂಗಾರದ ಸಿಂಗಾರ, ಅಲ್ಲದೆ ಹೇಳುವಾಗ ನರಸಿಂಹನ ಆವೇಶ ಇದನ್ನು ನೋಡಿ - ಅದೇ ನರಸಿಂಹ' ಎಂದು ಕೇಳುವ ಸ್ತ್ರೀ-ಪುರುಷರು ಓಡಿಹೋಗದಿದ್ದಾರೆ? 'ಪುರಾಣ ಕೇಳುತ್ತೇವೆ' ಎಂಬ ನಿಶ್ಚಯದ ಅರಿವೇ ಅವರನ್ನು ಆಶ್ಚರ್ಯಮಾತ್ರದಲ್ಲಿ ನಿಲ್ಲಿಸುತ್ತದೆ. ಭಯದ ತೀವ್ರತೆ ಹೆಚ್ಚಿದರೆ ಭೂತದ......................"

"ನಿನಗೆ ಇಂದು ಯಾವುದೋ ಭೂತ ಬಡಿದದ್ದೇ ನಿಜ. ನಾನಿಂದರೆ ಇಷ್ಟರಲ್ಲಿ ಹೇಳಿ ಮುಗಿಸುತ್ತಿದ್ದೆ" ಎಂದು ನಾಸಿ ತನ್ನ ಚಪಲ ತೋರ್ಪಡಿಸಿದ.

ಅಭಯ "ಹೌದು - ಮಗೂ" ಎಂದು ಮುಂದುವರಿದ--

—"ಭೂತದ ಭಜನೆ ನಡೆದೇ ಇತ್ತು. ನನಗೆ ಭೂತದಲ್ಲಿದ್ದಷ್ಟು ನಂಬಿಗೆ ಪರಮಾತ್ಮನಲ್ಲಿದ್ದಿಲ್ಲವಾದರೂ ನಾನೂ ನನಗೆ ತಿಳಿಯುವಂತೆ ಭಜನೆ ಮಾಡತೊಡಗಿದ್ದೆ; ಆದರೆ ಮನಸ್ಸಿನಲ್ಲಿ!"

"ಅದರಿಂದ ಭಯ ನಿವಾರಣೆಯಾಗಿರಬಹುದು" ಎಂದು ಮೇನಾಪಿ, ಭಯ-ಭಕ್ತಿಯಿಂದ ಕೇಳಿಕೊಂಡ.

"ಇಲ್ಲವಯ್ಯಾ! ನಾನದಕ್ಕೇ ಭಯಗೊಂಡದ್ದೆನ್ನಲಿಲ್ಲವೇ? ಕಂಬಳಾರದೆ ಮತ್ತೆ ಹಾಸಿಗೆಯಲ್ಲೊರಗಿದೆ. ಕಣ್ಣು ಮುಚ್ಚಿದೆ. ಏನೇನೋ ವಿಚಾರದಲ್ಲಿ ಜೊಂಪೂ ಹತ್ತಿತು.

"ಒಮ್ಮೆಲೇ ಯಾರೋ ಚೀರಿದ್ದು ಕೇಳಿತು! ಎಚ್ಚರವಾಗಿ ಮುಸುಕು ತೆರೆದು ನೋಡುತ್ತೇನೆ: ಬಾಗಿಲು ತೆರೆದಿದೆ. ಈ ನಾಸಿಯೇ ಕೈಯಲ್ಲಿ ಕೀಲೀ ಹಿಡಿದು ಭಯವಿಹ್ವಲನಾಗಿ ನಿಂತಿದ್ದಾನೆ.

"'ಯಾಕೋ ನಾಸೀ' ಎಂದೆ. ನಡುಗುತ್ತಿದ್ದ ಈ ಪುರುಷಶ್ರೇಷ್ಠ! ಎದ್ದು ಕುಳಿತೆ. ಇನ್ನೂ ಅವನಿಗೆ ಎಚ್ಚರ ಬಂದಿಲ್ಲವೆಂದು 'ನಾಸೀ' ಎಂದು ಕೂಗಿದೆ.

"ಅಟ್ಟದಲ್ಲಿಯೂ ಚೀರಿದಂತಾಯಿತು!

"ಎಚ್ಚರವಷ್ಟೆ ನಾನೂ ಚೀರಿದೆ! ಎದುರು ನಾಣಿಯೇ ಭೂತನಂತೆ ನಿಂತದ್ದಕ್ಕಲ್ಲ; ಮೇಲಿನ ಭಜನೆಯ ಭೂತವೂ ಚೀರಿಕೊಂಡಿತಲ್ಲಾ—ಎಂದು.

"ನನಗೆ ಭೂತದ ಚೀರುವಿಕೆಯೇ ಭಯವಾದರೆ ನಾಣಿಗೆ ಅದೇ ಸ್ಥೈರ್ಯಕೊಟ್ಟಿತು. ಅವನಿಗೆ ಅದು ಪರಿಚಿತ ಸ್ವರವಂತೆ!

"ನಾನೂ ಎದ್ದೆ. 'ಚೀರಬೇಡ ನಾಣಿ. ನಿನಗೆ ನಾನು ಭೂತ. ನನಗೆ ನೀನು ಭೂತವಾಗಿ ಕಂಡರೆ—ಮೇಲೆ ಒಂದು ಬ್ರಹ್ಮರಾಕ್ಷಸವೇ ಕುಳಿತಿದೆ!' ಎಂದುಸುರಿದೆ.

"ಮೇಲೆ ದೀಕ್ಷಿತರಿದ್ದಾರೆ!" ಎಂದ ನಾಣಿ.

"ಅಯ್ಯೋ ಮಹಾರಾಯಾ—ನನಗೆ ಗೊತ್ತೇ ಇಲ್ಲವಲ್ಲ" ಎಂದುಸುರಿದೆ ನಾನು.

"ಅವರೂ ಚೀರಿದರಲ್ಲಾ—ಎಂದು ನಾಣಿ ಎದ್ದ, ಹತ್ತಹೋದ. ಆದರೆ ಅವನಿಗೆ ಮತ್ತೆ ಭಯ. ನಾನೂ ಎದ್ದೆ. ಇಬ್ಬರೂ ಹೋಗಿ ನೋಡುತ್ತೇವೆ:

"ದೀಕ್ಷಿತರು ಆ ನಿಲುಗನ್ನಡಿಗಳ ನಡುವೆ ನೆಲಕ್ಕೆ ಬಿದ್ದಿದ್ದಾರೆ!

"ಇಬ್ಬರೂ ಹೋಗಿ ಕೂಗಿಕೊಂಡೆವು. ಅವರು ಕಣ್ಣು ತೆರೆಯಲೇ ಇಲ್ಲ

"ನಾಣಿ 'ರಘುಪತಿ ರಾಘವ' ಸುರುವುಮಾಡಿದ.

—"ದೀಕ್ಷಿತರು ಆಗ ಎಚ್ಚರವಾಗಿ ನಮ್ಮನ್ನು ಗಾಬರಿಯಲ್ಲೇ ನೋಡಿದರು."

ಅಭಯ ತನ್ನ ಮಾತು ತೀರಿಸಿ ಮುಖ ಒರೆಸಿಕೊಂಡ.

* * * *

ಆಮೇಲೆ ನಾಣಿ ಹೇಳಿದ:—"ಮೇಲೆ ದೀಕ್ಷಿತರು ಇದ್ದದ್ದು ಇವನಿಗೆ ಗೊತ್ತಿಲ್ಲ; ಇವನು ಮಲಗಿದ್ದು ನನಗೆ ಗೊತ್ತಿಲ್ಲ. ಸಭೆಯಲ್ಲಿ ಕೇಳಿಸಿದ ಕೀಲೀ ಕೈ ಇಸಿದುಕೊಂಡು ದೀಕ್ಷಿತರೊಬ್ಬರೇ ಇದ್ದಾರೆಂದು ನಾನು ಮೊದಲು ಮನೆಗೆ ಬಂದರೆ ಪಡಸಾಲೆಯಲ್ಲಿಯೇ ಈ 'ಕಂಬಳೀದೆವ್ವ' ಮಲಗಿತ್ತು. ಇವನಿಗೆ ಹೆದರಿ ನಾನು ಚೀರಿದೆ. ನನ್ನ ಸ್ವರಕ್ಕೆ ಹೆದರಿ ದೀಕ್ಷಿತರು ಚೀರಿದರು. ದೀಕ್ಷಿತರೆಂದು ತಿಳಿಯದೆ—ಭೂತವೆಂದು ತಿಳಿದು—ಇವನು ಚೀರಿದ. ಒಟ್ಟು ಚೀತ್ಕಾರತ್ರಯವಾಯಿತು.

“ ಶೀನ ಕೇಲಿಗೆ ಕೈ ಕೊಡುವಾಗ ಅಭಯ ಮುಳುಗಿದ್ದ. ಹೇಳಿದ್ದೇ ನನಗೆ ಕೈ ಕೊಟ್ಟ!’ ”

*　　　*　　　*　　　*

ಎಲ್ಲರೂ ನಿಸ್ತಬ್ಧರಾಗಿ ಕುಳಿತಿದ್ದೆವು. ಅಭಯ, ನಾನಿ ಇಬ್ಬರೇ ನಗುತ್ತಿದ್ದರು.

ಬೆಳುದಿಂಗಳಿಕ್ಕೆ ಅಬ್ಬರದ ಕಡಲು ಏರುತ್ತ ಏರುತ್ತ ಯಾವಾಗ ನಮ್ಮ ಹತ್ತಿರ ಬಂದಿತ್ತೋ—ಒಂದು ತೆರೆ ಬಂದು ನಮಗೇ ಅಪ್ಪಳಿಸಿತು! ಇನ್ನೂ ಭೂತದ ಕಥೆಯಲ್ಲಿಯೇ ಮುಳುಗಿದ್ದ ದೇಸಾಯಿ ‘ಅಯ್ಯೋ’ ಎಂದು ಚೀರಿ ನೀರಿನೊಡನೆ ಜಾರಿದ. ಅಭಯ ತನ್ನ ಉಭಯಹಸ್ತದಿಂದ ಅವನನ್ನು ಹಿಡಿದೆತ್ತಿದ.

*　　　*　　　*　　　*

ತಿಂಗಳು ನಡುನೆತ್ತಿಗೆ ಅಡರಿದ್ದ. ಸೊಕ್ಕಿನ ತೆರೆಗಳು ಮದ್ದಾನೆಗಳಂತೆ ಏರಿಬರುತ್ತಿದ್ದವು. ಆ ಸರಾಟ, ನೊರೆಯ ಕುಣಿದಾಟದ ರಮ್ಯ ಲೋಕದಲ್ಲಿ ನಮ್ಮ ಭಯ ನಿವಾರಣೆಯಾಗಲು ಬಹಳ ಸಮಯ ಹಿಡಿಯಲಿಲ್ಲ.